

# ಕನ್ನಡ ಸಾಹಿತ್ಯ

2

ಸಂಚಿಕೆ

567

## ಸ್ನಾತಕೋತ್ತರ ಪದವಿ ಪೂರ್ವಸಿದ್ಧತಾ ಕಾರ್ಯಕ್ರಮ

# ಎಂಪಿಪಿ

# MPP

MASTER'S PREPARATORY PROGRAMME

ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ

ಮಾನಸ ಗಂಗೋತ್ರಿ, ಮೈಸೂರು - 570 006

ಉನ್ನತ ಶಿಕ್ಷಣಕ್ಕಾಗಿ ಇರುವ ಅವಕಾಶಗಳನ್ನು ಹೆಚ್ಚಿಸುವುದಕ್ಕೆ ಮತ್ತು ಶಿಕ್ಷಣವನ್ನು ಪ್ರಜಾತಂತ್ರೀಕರಿಸುವುದಕ್ಕೆ ಮುಕ್ತ ವಿಶ್ವವಿದ್ಯಾನಿಲಯ ವ್ಯವಸ್ಥೆಯನ್ನು ಆರಂಭಿಸಲಾಗಿದೆ.

**ರಾಷ್ಟ್ರೀಯ ಶಿಕ್ಷಣ ನೀತಿ 1986**

*The Open University system has been initiated in order to augment opportunities for higher education and as instrument of democrating education.*

***National Education Policy 1986***

ಮುಕ್ತ ವಿಶ್ವವಿದ್ಯಾನಿಲಯವು ದೂರಶಿಕ್ಷಣ ಪದ್ಧತಿಯಲ್ಲಿ ಬಹುಮಾಧ್ಯಮಗಳನ್ನು ಉಪಯೋಗಿಸುತ್ತದೆ. ..............................ವಿದ್ಯಾಕಾಂಕ್ಷಿಗಳನ್ನು ಜ್ಞಾನ ಸಂಪಾದನೆಗಾಗಿ ಕಲಿಕಾ ಕೇಂದ್ರಕ್ಕೆ ಕೊಂಡೊಯ್ಯುವ ಬದಲು, ಜ್ಞಾನ ಸಂಪತ್ತನ್ನು ವಿದ್ಯೆ ಕಲಿಯುವವರ ಬಳಿ ಕೊಂಡೊಯ್ಯುವ ವಾಹಕವಾಗಿದೆ.

ಡಾ. ಕುಳಂದೈಸ್ವಾಮಿ

*"The Open University system makes use of Multimedia in distance education system. .............................. it is vehicle which transports knowledge to the place of learners rather than transport to the place of learning.*

*Dr. Kulandai Swamy*

## ವಿಶ್ವಮಾನವ ಸಂದೇಶ

ಪ್ರತಿಯೊಂದು ಮಗುವು ಹುಟ್ಟುತ್ತಲೇ - ವಿಶ್ವಮಾನವ. ಬೆಳೆಯುತ್ತಾ ನಾವು ಅದನ್ನು 'ಅಲ್ಪ ಮಾನವ'ನನ್ನಾಗಿ ಮಾಡುತ್ತೇವೆ. ಮತ್ತೆ ಅದನ್ನು 'ವಿಶ್ವಮಾನವ'ನನ್ನಾಗಿ ಮಾಡುವುದೇ ವಿದ್ಯೆಯ ಕರ್ತವ್ಯವಾಗಬೇಕು.

ಮನುಜ ಮತ, ವಿಶ್ವ ಪಥ, ಸರ್ವೋದಯ, ಸಮನ್ವಯ, ಪೂರ್ಣದೃಷ್ಟಿ ಈ ಪಂಚಮಂತ್ರ ಇನ್ನು ಮುಂದಿನ ದೃಷ್ಟಿಯಾಗಬೇಕಾಗಿದೆ. ಅಂದರೆ, ನಮಗೆ ಇನ್ನು ಬೇಕಾದುದು ಆ ಮತ ಈ ಮತ ಅಲ್ಲ; ಮನುಜ ಮತ. ಆ ಪಥ ಈ ಪಥ ಅಲ್ಲ; ವಿಶ್ವ ಪಥ. ಆ ಒಬ್ಬರ ಉದಯ ಮಾತ್ರವಲ್ಲ; ಸರ್ವರ ಸರ್ವಸ್ತರದ ಉದಯ. ಪರಸ್ಪರ ವಿಮುಖವಾಗಿ ಸಿಡಿದು ಹೋಗುವುದಲ್ಲ; ಸಮನ್ವಯಗೊಳ್ಳುವುದು. ಸಂಕುಚಿತ ಮತದ ಆಂಶಿಕ ದೃಷ್ಟಿ ಅಲ್ಲ; ಭೌತಿಕ ಪಾರಮಾರ್ಥಿಕ ಎಂಬ ಭಿನ್ನದೃಷ್ಟಿ ಅಲ್ಲ; ಎಲ್ಲವನ್ನು ಭಗವದ್ ದೃಷ್ಟಿಯಿಂದ ಕಾಣುವ ಪೂರ್ಣದೃಷ್ಟಿ.

ಕುವೆಂಪು

## *Gospel of Universal Man*

Every Child, at birth, is the universal man. But, as it grows, we turn it into "a petty man". It should be the function of education to turn it again into the enlightened "universal man".

The Religion of Humanity, the Universal Path, the Welfare of All, Reconciliation, the Integral Vision- these *five mantras* should become View of the Future. In other words, what we want henceforth is not this religion or that religion, but the Religion of Humanity ; not this path or that path, but the Universal Path ; not the well-being of this individual or that individual, but the Welfare of All ; not turning away and breaking off from one another, but reconciling and uniting in concord and harmony ; and, above all, not the partial view of a narrow creed, not the dual outlook of the material and the spiritual, but the Integral Vision of seeing all things with the eye of the Divine.

*Kuvempu*



# ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ

ಮಾನಸ ಗಂಗೋತ್ರಿ
ಮೈಸೂರು - 570 006

ಎಂ.ಪಿ.ಪಿ.
ಕನ್ನಡ ಸಾಹಿತ್ಯ

| ಸಂಚಿಕೆಗಳು | ವಿಷಯಗಳು | |
|---|---|---|
| 1 | ಕನ್ನಡ ಸಾಹಿತ್ಯ ಚರಿತ್ರೆ<br>ಹಳಗನ್ನಡ ಸಾಹಿತ್ಯ<br>ಚಂಪೂ ಸಾಹಿತ್ಯ - ವಚನ ಸಾಹಿತ್ಯ | ಘಟಕ - 1 ಕನ್ನಡ ಸಾಹಿತ್ಯದ ಪ್ರಾಚೀನತೆ<br>ಘಟಕ - 2 ೧ನೇ ನಾಗವರ್ಮ,ನಾಗಚಂದ್ರ,ನಯಸೇನ,ನೇಮಿಚಂದ್ರ,ರುದ್ರಭಟ್ಟ,ಜನ್ನ ಮತ್ತು ಆಂಡಯ್ಯ<br>ಘಟಕ - 3 ವಚನ ಸಾಹಿತ್ಯ : ಹಿನ್ನೆಲೆ, ಉಗಮ, ಬೆಳವಣಿಗೆ, ಲಕ್ಷಣ<br>ಘಟಕ - 4 ಪ್ರಮುಖ ವಚನಕಾರರು, ವಚನ ಸಾಹಿತ್ಯದ ಕೊಡುಗೆ |
| 2 | ಕನ್ನಡ ಸಾಹಿತ್ಯ ಚರಿತ್ರೆ<br>ನಡುಗನ್ನಡ ಸಾಹಿತ್ಯ | ಘಟಕ - 1 ರಗಳೆ : ಸ್ವರೂಪ, ಪ್ರಭೇದಗಳು<br>ಘಟಕ - 2 ಕವಿ ಹರಿಹರ ಮತ್ತು ಆತನ ಕೃತಿಗಳು<br>ಘಟಕ - 3 ಷಟ್ಪದಿ ಸಾಹಿತ್ಯ - ಪರಿಚಯ, ರಾಘವಾಂಕ : ಕವಿ, ಕೃತಿಗಳು<br>ಘಟಕ - 4 ಷಟ್ಪದಿ ಕವಿಗಳು : ಕುಮಾರವ್ಯಾಸ, ಚಾಮರಸ, ಕುಮಾರವಾಲ್ಮೀಕಿ |
| 3 | ಕನ್ನಡ ಸಾಹಿತ್ಯ ಚರಿತ್ರೆ<br>ನಡುಗನ್ನಡ ಸಾಹಿತ್ಯ | ಘಟಕ - 1 ದಾಸ ಸಾಹಿತ್ಯ : ಶ್ರೀಪಾದರಾಜರು, ಪುರಂದರ, ಕನಕ, ಜಗನ್ನಾಥದಾಸರು ಮೊದಲಾದವರು<br>ಘಟಕ - 2 ತ್ರಿಪದಿ ಸಾಹಿತ್ಯ : ಪರಿಚಯ, ಸರ್ವಜ್ಞ ಕವಿ<br>ಘಟಕ - 3 ಸಾಂಗತ್ಯ ಸಾಹಿತ್ಯ - ೧ : ದೇಪರಾಜ, ಶಿಶುಮಾಯಣ, ನಿಜಗುಣಶಿವಯೋಗಿ, ಕನಕದಾಸರು<br>ಘಟಕ - 4 ಸಾಂಗತ್ಯ ಸಾಹಿತ್ಯ - ೨ : ನಂಜುಂಡ ಕವಿ, ರತ್ನಾಕರವರ್ಣಿ, ಸಂಚಿಯ ಹೊನ್ನಮ್ಮ |
| 4 | ಕನ್ನಡ ಸಾಹಿತ್ಯ ಚರಿತ್ರೆ<br>ಆಧುನಿಕ ಕನ್ನಡ ಸಾಹಿತ್ಯ | ಘಟಕ - 1 ಹೊಸಗನ್ನಡದ ಅರುಣೋದಯ : ಭಾಗ - ೧<br>ಘಟಕ - 2 ಹೊಸಗನ್ನಡ ಅರುಣೋದಯ : ಭಾಗ - ೨<br>ಘಟಕ - 3 ನವೋದಯ ಮತ್ತು ಪ್ರಗತಿಶೀಲ ಸಾಹಿತ್ಯ<br>ಘಟಕ - 4 ನವ್ಯ ಮತ್ತು ದಲಿತ ಬಂಡಾಯ ಸಾಹಿತ್ಯ |
| 5 | ಕನ್ನಡ ಸಾಹಿತ್ಯ ಚರಿತ್ರೆ<br>ಆಧುನಿಕ ಕನ್ನಡ ಸಾಹಿತ್ಯ | ಘಟಕ - 1 ಭಾವಗೀತೆ, ಕಾದಂಬರಿ<br>ಘಟಕ - 2 ಸಣ್ಣ ಕಥೆ : ಸ್ವರೂಪ, ಲಕ್ಷಣ ಮತ್ತು ಇತಿಹಾಸ<br>ಘಟಕ - 3 ನಾಟಕ : ವಸ್ತು, ಸಂವಿಧಾನ, ರಂಗಭೂಮಿ, ನಾಟಕ ಪರಂಪರೆ<br>ಘಟಕ - 4 ಪ್ರಬಂಧ, ವಿಮರ್ಶೆ |
| 6 | ಛಂದಸ್ಸು | ಘಟಕ - 1 ಲಯ, ಯತಿ, ಪ್ರಾಸ, ಪಾದ, ಮಾತ್ರಾಗಣ ಸ್ವರೂಪ, ಕನ್ನಡ ಛಂದೋಗ್ರಂಥಗಳ ಪರಿಚಯ<br>ಘಟಕ - 2 ವರ್ಣವೃತ್ತಗಳು, ಖ್ಯಾತ ಕರ್ಣಾಟಕಗಳು; ಮಾತ್ರಾವೃತ್ತಗಳು, ಕಂದ, ರಗಳೆ;ಅಂಶವೃತ್ತಗಳು<br>ಘಟಕ - 3 ಹೊಸಗನ್ನಡ ಛಂದಸ್ಸು - ೧ : ಗಣವಿನ್ಯಾಸ, ಪ್ರಯೋಗಗಳು, ಸ್ವರಾಘಾತ, ಗಣಪರಿವೃತ್ತಿ<br>ಘಟಕ - 4 ಹೊಸಗನ್ನಡ ಛಂದಸ್ಸು - ೨ : ಮಾತ್ರೆ, ಮುಡಿ, ಪದ್ಯಗಣ |
| 7 | ಭಾರತೀಯ ಕಾವ್ಯಮೀಮಾಂಸೆ | ಘಟಕ - 1 ಮೀಮಾಂಸೆಯ ಉಗಮ, ಕಾವ್ಯದ ಆಕರ, ಪರಿಕರ, ಸಹೃದಯ, ಕಾವ್ಯ ಲಕ್ಷಣ ಇತ್ಯಾದಿ<br>ಘಟಕ - 2 ಪ್ರಸ್ಥಾನಗಳು : ಅಲಂಕಾರ, ರೀತಿ, ಧ್ವನಿ , ಔಚಿತ್ಯ, ಮೀಮಾಂಸಕರು<br>ಘಟಕ - 3 ರಸಸಿದ್ಧಾಂತ, ರಸಪ್ರಭೇದಗಳು<br>ಘಟಕ - 4 ಧ್ವನಿ ಸಿದ್ಧಾಂತ, ಧ್ವನಿ ಪ್ರಭೇದಗಳು<br>ಘಟಕ - 5 ಔಚಿತ್ಯ ತತ್ವ |
| 8 | ಸಾಹಿತ್ಯ ವಿಮರ್ಶೆ | ಘಟಕ - 1 ಪಾಶ್ಚಿಮಾತ್ಯ ವಿಮರ್ಶಕರ ಪರಿಚಯ, ವಿಮರ್ಶೆಯ ಪರಿಚಯ<br>ಘಟಕ - 2 ವಿಮರ್ಶೆಯ ಸ್ವರೂಪ<br>ಘಟಕ - 3 ವಿಮರ್ಶೆಯ ವಿಧಾನಗಳು - 1<br>ಘಟಕ - 4 ವಿಮರ್ಶೆಯ ವಿಧಾನಗಳು - 2 |
| 9 | ಕನ್ನಡ ಭಾಷೆಯ ಚರಿತ್ರೆ | ಘಟಕ - 1 ಭಾಷೆ : ಸ್ವರೂಪ, ಲಕ್ಷಣ, ವರ್ಗೀಕರಣ, ದ್ರಾವಿಡ ಭಾಷೆಗಳು, ದ್ರಾವಿಡ ಭಾಷಾವರ್ಗೀಕರಣ<br>ಘಟಕ - 2 ಕನ್ನಡ ಕರ್ಣಾಟಕ ಶಬ್ದ ನಿಷ್ಪತ್ತಿ, ಕನ್ನಡ ಸಂಸ್ಕೃತ - ಸಂಬಂಧ, ಪ್ರಾಂತ ಭೇದಗಳು ಇತ್ಯಾದಿ<br>ಘಟಕ - 3 ವರ್ಣಮಾಲೆ, ನಾಮಪದ, ಲಿಂಗ, ವಚನ, ವಿಭಕ್ತಿ, ಕ್ರಿಯಾಪದ, ಗುಣವಾಚಕ, ಅವ್ಯಯ ಇತ್ಯಾದಿ<br>ಘಟಕ - 4 ಶಬ್ದಕೋಶ ಬೆಳವಣಿಗೆ, ದೇಶ್ಯ - ಅನ್ಯದೇಶ್ಯ ಪದಗಳು |
| 10 | ವ್ಯಾಕರಣ | ಘಟಕ - 1 ಶಬ್ದಮಣಿದರ್ಪಣಂ : ವ್ಯಾಕರಣ ಪರಿಚಯ, ವರ್ಣಮಾಲೆ<br>ಘಟಕ - 2 ಸಂಧಿಪ್ರಕರಣ, ನಾಮಪ್ರಕರಣ<br>ಘಟಕ - 3 ಸಮಾಸ ಪ್ರಕರಣ, ತದ್ಧಿತ ಪ್ರಕರಣ<br>ಘಟಕ - 4 ಆಖ್ಯಾತ, ಧಾತು, ಅಪಭ್ರಂಶ, ಅವ್ಯಯ ಪ್ರಕರಣ |

**ಸಂಚಿಕೆ - 2**

## ನಡುಗನ್ನಡ ಸಾಹಿತ್ಯ

## ಪಠ್ಯಕ್ರಮ ವಿನ್ಯಾಸ ಮತ್ತು ಸಂಪಾದಕ ಮಂಡಳಿ

| | |
|---|---|
| ಪ್ರೊ.ಕೆ.ಸುಧಾರಾವ್<br>ಕುಲಪತಿಗಳು ಮತ್ತು ಅಧ್ಯಕ್ಷರು<br>ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ | ಡೀನ್ (ಶೈಕ್ಷಣಿಕ) ಸಮಾವೇಶಕರು<br>ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ |
| **ಪ್ರೊ. ಬಿ.ಎನ್. ನಾಗರಾಜ ಭಟ್**<br>ಪ್ರಾಧ್ಯಾಪಕರು,<br>ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ,<br>ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ,<br>ಮೈಸೂರು. | ಸಂಪಾದಕರು |
| **ಡಾ. ಡಿ.ಟಿ. ಬಸವರಾಜ್**<br>ಅಧ್ಯಕ್ಷರು,<br>ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ,<br>ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ,<br>ಮೈಸೂರು. | ಸಂಪಾದಕರು / ಸಂಯೋಜಕರು |

## ಪಠ್ಯಕ್ರಮ ನಿರೂಪಕರು — ಸಂಚಿಕೆ - 2

| | |
|---|---|
| **ಡಾ. ಎಲ್. ರಾಜಶೇಖರಯ್ಯ**<br>ಪ್ರವಾಚಕರು, ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ,<br>ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು. | ಘಟಕ 1 ಮತ್ತು 2 |
| **ಪ್ರೊ. ಬಿ.ಎನ್. ನಾಗರಾಜ ಭಟ್**<br>ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ,<br>ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು. | ಘಟಕ 3 ಮತ್ತು 4 |

## ಪ್ರಕಾಶಕರು

ಶ್ರೀ ವಿ. ರಾಮಣ್ಣ
ಕುಲಸಚಿವರು (ಆಡಳಿತ)

ಕ.ರಾ.ಮು.ವಿ.,ಯ ಶೈಕ್ಷಣಿಕ ವಿಭಾಗದಿಂದ ಸಿದ್ಧಪಡಿಸಲಾಗಿದೆ.



ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ ಕೋರ್ಸ್‌ಗಳ ಹೆಚ್ಚಿನ ವಿವರಗಳಿಗೆ
ವಿಶ್ವವಿದ್ಯಾನಿಲಯದ ಕಾರ್ಯಾಲಯ, ಮಾನಸಗಂಗೋತ್ರಿ, ಮೈಸೂರು - 570 006 ಇಲ್ಲಿಂದ ಪಡೆಯಬಹುದು.

ಪ್ರಿಯ ವಿದ್ಯಾರ್ಥಿ,

ಕನ್ನಡ ಎಂ.ಎ., ವ್ಯಾಸಂಗಕ್ಕಾಗಿ ನಮ್ಮ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯದಲ್ಲಿ ಪ್ರವೇಶ ಪಡೆದಿರುವ ತಮ್ಮನ್ನು ನಮ್ಮ ಕನ್ನಡ ವಿಭಾಗದ ಅಧ್ಯಾಪಕ ವೃಂದ ಹೃತ್ಪೂರ್ವಕವಾಗಿ ಸ್ವಾಗತಿಸುತ್ತದೆ.

ತಮ್ಮ ಕೈಯಲ್ಲಿರುವ ಈ ಸಾಮಗ್ರಿಯು ನಮ್ಮಲ್ಲಿ 'ಮುಕ್ತ' ಪದ್ಧತಿಯಲ್ಲಿ ಪ್ರವೇಶ ಪಡೆದಿರುವ ವಿದ್ಯಾರ್ಥಿಗಳಿಗೆಂದೇ ವಿಶೇಷವಾಗಿ ಸಿದ್ಧಪಡಿಸಿದುದಾಗಿದೆ. ತಾವು ತಮ್ಮ ಸ್ವಂತ ಇಚ್ಛೆ ಮತ್ತು ಪರಿಶ್ರಮದಿಂದ ಕನ್ನಡ ಸಾಹಿತ್ಯವನ್ನು ವ್ಯಾಪಕವಾಗಿ ಓದಿಕೊಂಡಿದ್ದೀರಿ ಮತ್ತು ಅಭಿಮಾನವನ್ನೂ ಬೆಳೆಸಿಕೊಂಡಿದ್ದೀರಿ ಎಂದು ಭಾವಿಸಿದ್ದೇವೆ. ಇದನ್ನು ತುಂಬು ಮನಸ್ಸಿನಿಂದ ತಾವು ಗೌರವಿಸುತ್ತೇವೆ ಕೂಡ. ಈ ಬಗೆಯಲ್ಲಿ ತಾವು ಓದುವಿಕೆಯನ್ನು ಮಾಡಿದವರಾಗಿದ್ದರೂ ಅದು ಕೆಲವೊಮ್ಮೆ ಒಂದು ಶಿಸ್ತಿಗೆ ಒಳಪಟ್ಟ ಅಧ್ಯಯನವಾಗದೆಯೂ ಇರಬಹುದು. ಇಂತಹ ಸ್ಥಿತಿಯಿಂದ ನಿರ್ದಿಷ್ಟ ಶಿಸ್ತಿನ ಪದ್ಧತಿಗೆ ಪ್ರವೇಶ ಪಡೆದಾಗ ತಮಗೆ ಕೆಲಮಟ್ಟಿಗೆ ಶೈಕ್ಷಣಿಕ ತೊಡಕು (ಕೆಲವರಿಗಾದರೂ) ಎದುರಾಗಬಹುದು. ಈ ಕೊರತೆಯನ್ನು ನೀಗುವ ಸಲುವಾಗಿ ***'ಸ್ನಾತಕೋತ್ತರ ಪದವಿ ಪೂರ್ವಸಿದ್ಧತಾ ಕಾರ್ಯಕ್ರಮ'*** **[ *Master's Degree Preparatory Programe (MPP)* ]** ವನ್ನು ಮುಕ್ತಪದ್ಧತಿಯ ವಿದ್ಯಾರ್ಥಿಗಳಿಗೆ ರೂಪಿಸಲಾಗಿದೆ. ಸಾಂಪ್ರದಾಯಿಕ ಶಿಕ್ಷಣ ಪದ್ಧತಿಯಲ್ಲಿ ಒಬ್ಬ ವಿದ್ಯಾರ್ಥಿ (ಬಿ.ಎ., ಪದವಿಯವರೆಗೆ) ವ್ಯಾಸಂಗ ಮಾಡಿರುವ ವಸ್ತು-ವಿಷಯಗಳ ಸ್ಥೂಲ ಮಾಹಿತಿಯನ್ನು ಈ (ಎಂಪಿಪಿ) ಸಾಮಗ್ರಿಯಲ್ಲಿ ಅಳವಡಿಸಲಾಗಿದೆ. ಮುಕ್ತ ಪದ್ಧತಿಯಲ್ಲಿ ಪ್ರವೇಶ ಪಡೆದ ತಮಗೆ ಈ ಸಾಮಗ್ರಿಯು ಕನ್ನಡ ಎಂ.ಎ. ವ್ಯಾಸಂಗಕ್ಕೆ ಸೂಕ್ತ ತಳಹದಿಯನ್ನು ನೀಡುವುದರೊಂದಿಗೆ ಆತ್ಮವಿಶ್ವಾಸವನ್ನು ಮೂಡಿಸುತ್ತದೆ.

ಕನ್ನಡ ಸಾಹಿತ್ಯ ಕುರಿತ 10 ಸಂಚಿಕೆಗಳಲ್ಲಿ ಇದು 2 ನೆಯದು. ಇದರಲ್ಲಿ ನಡುಗನ್ನಡ ಸಾಹಿತ್ಯ ಪ್ರಕಾರ ಮತ್ತು ಕವಿ ಕೃತಿಗಳನ್ನು ವಿವೇಚಿಸಲಾಗಿದೆ. ರಗಳೆ ಪ್ರಕಾರದ ಸ್ವರೂಪ, ಪ್ರಭೇದಗಳು; ರಗಳೆಯ ಕವಿ ಹರಿಹರ ಅತನ ಕೃತಿಗಳು ; ಷಟ್ಪದಿ ಪ್ರಕಾರ ಮತ್ತು ಷಟ್ಪದಿ ಕವಿಗಳಾದ ಕುಮಾರವ್ಯಾಸ, ರಾಘವಾಂಕ, ಚಾಮರಸ ಮತ್ತು ಕುಮಾರವಾಲ್ಮೀಕಿ ಮತ್ತು ಅವರ ಕೃತಿಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

ಈ ಸಾಮಗ್ರಿಯಲ್ಲಿನ ವಿಷಯಗಳನ್ನು ಸೂಕ್ಷ್ಮವಾಗಿ ತಾವು ಓದಬೇಕು, ಒಂದೊಂದು ಅಂಕಗಳಿಗೆ ಉತ್ತರಿಸಬಹುದಾದ 'ವಸ್ತುನಿಷ್ಠ' (Objective Type) ಪ್ರಶ್ನೆಗಳನ್ನು ತಾವೇ ಸಿದ್ಧಪಡಿಸಿಕೊಂಡು ಉತ್ತರಗಳನ್ನು ಕಂಡುಕೊಂಡು ಈ ಸಾಮಗ್ರಿ ಕುರಿತ ಪರೀಕ್ಷೆಗೆ ಸಿದ್ಧವಾಗಬೇಕು ಎಂದು ಸೂಚಿಸುತ್ತ; ಈ ಸಾಮಗ್ರಿಯ ಓದು ತಮಗೆ ಉದ್ದಿಷ್ಟಫಲವನ್ನು ನೀಡಲಿ ಎಂದು ಆಶಿಸುತ್ತೇವೆ.

ಅಧ್ಯಾಪಕ ವೃಂದದ ಪರವಾಗಿ
ತಮ್ಮ ವಿಶ್ವಾಸಿ
**ಡಾ. ಡಿ.ಟಿ. ಬಸವರಾಜ್**
ಅಧ್ಯಕ್ಷರು, ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ
ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು.

## ಸಂಚಿಕೆ - 2
## ಕನ್ನಡ ಸಾಹಿತ್ಯ ಚರಿತ್ರೆ - ನಡುಗನ್ನಡ ಸಾಹಿತ್ಯ

---

### ಘಟಕ - 1
### ರಗಳೆ : ಸ್ವರೂಪ, ಪ್ರಭೇದಗಳು

---

**ಪರಿವಿಡಿ :**

## 1.0 ಉದ್ದೇಶ

- ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಛಂದೋಬಂಧವಾಗಿ ಬಳಸಲ್ಪಟ್ಟಿರುವ ರಗಳೆ ಛಂದಸ್ಸಿನ ಪರಿಚಯವನ್ನು ಮನಗಾಣುವಿರಿ.
- ರಗಳೆ ಮಟ್ಟಿನ್ನ ಸ್ಥೂಲ ಪರಿಚಯದೊಂದಿಗೆ ಇದರ ಮಹತ್ವವನ್ನು ಹಿಂದಿನ ಕವಿಗಳ ಕಥಾವಾಹಿನಿಗೆ ಹೇಗೆ ಪೂರಕವಾಗಿತ್ತೆಂಬುದನ್ನು ತಿಳಿಯುವಿರಿ.

## 1.1 ಪೀಠಿಕೆ

ಇದು 2ನೇ ಸಂಚಿಕೆ 1ನೇ ಘಟಕ : ಎಂ.ಪಿ.ಪಿ. ಸಾಮಗ್ರಿ. ಇದರಲ್ಲಿ ರಗಳೆಯಸ್ವರೂಪ, ರಗಳೆರೂಪ ಪಡೆದ ಬಗೆ, ಅದರ ವಿಭಾಗಗಳೆಷ್ಟು ಎಂಬುದನ್ನು ಸಂಕ್ಷಿಪ್ತವಾಗಿ ಪರಿಚಯ ಮಾಡಲಾಗಿದೆ. ಇಲ್ಲಿ ಕೇವಲ ಆರಂಭಿಕ ಅಂಶಗಳನ್ನು ತಿಳಿಯಲು ಪ್ರಯತ್ನಿಸುವವರಿಗಷ್ಟೆ ಈ ಪ್ರಯತ್ನಮಾಡಲಾಗಿದೆ. ಇದಕ್ಕೆ ಪೂರಕವಾದ ಹೆಚ್ಚಿನ ವಿಷಯಗಳನ್ನು ತಿಳಿಯಲು ಪೂರಕ ಗ್ರಂಥಗಳನ್ನು ಅಭ್ಯಾಸಮಾಡಬೇಕು.

## 1.2 ರಗಳೆ

ರಗಳೆ ಎಂಬುದು ಮೂಲತಃ ಒಂದು ಮಾತ್ರಾನಿಯತವಾದ ಛಂದೋಬಂಧ ಮಾತ್ರ. ಆಮೇಲೆ ಅದು ಒಂದು ಸಾಹಿತ್ಯರೂಪವಾಗಿ ಪರಿಣಮಿಸಿತು. ಕವಿರಾಜ ಮಾರ್ಗದಲ್ಲಿ ಅದರ ಉಲ್ಲೇಖವಿಲ್ಲ, ಉದಾಹರಣೆಯೂ ಇಲ್ಲ. ಆದರೆ ಅದು ಕವಿ ರಾಜಮಾರ್ಗಕಾಲದ ಅಥವಾ ಅದಕ್ಕೆ ಹಿಂದಿನ ಗ್ರಂಥಗಳಲ್ಲಿ ಇದ್ದಿರುವ ಸಂಭವವಿದೆ. ನಾಗವರ್ಮನ ಛಂದೋಂಬುಧಿಯಲ್ಲಿ ಶಾಸ್ತ್ರರೀತ್ಯಾ ಅದರ ಮೊದಲ ಉಲ್ಲೇಖ, ಲಕ್ಷ್ಯವಿಲ್ಲದ ಲಕ್ಷಣ ಬಂದಿವೆ. ನಮಗೆ ದೊರೆತ ಕನ್ನಡದ ಆದಿಕಾವ್ಯಗಳಾದ ಆದಿಪುರಾಣ, ಪಂಪಭಾರತಗಳಲ್ಲಿ ರಗಳೆ ವರ್ಣಕವಾಗಿ ಬಂದಿರುವಂತೆ ಅವಕ್ಕೆ ಸಾಕಷ್ಟು ಮುಂಚಿನವಗಳಾದ ಗುಣನಂದಿ, ಗುಣವರ್ಮ-೧ ಇವರ ಚಂಪೂ ಕೃತಿಗಳಲ್ಲಿಯೂ ಬಂದಿರ ಬೇಕು. ನಾಗವರ್ಮ 'ಕಾವ್ಯಾವಲೋಕನ'ದಲ್ಲಿ ಬಂದ ಬಾಜನೆಗಬ್ಬದ ಲಕ್ಷಣದಲ್ಲಿ ಹಲತೆರದ ಪದ್ಯ ಮತ್ತು ಲಲಿತವಾದ ಪದ್ಧತಿಕೆ ಇವುಗಳ ಸಮಾವೇಶವಿದೆ. ಕವಿರಾಜ ಮಾರ್ಗಕಾರನು ಲಕ್ಷಣಿಸಿದ ಚತ್ತಾಣಕ್ಕೂ ಈ ಬಾಜನೆಗಬ್ಬಕ್ಕೂ ಒಂದು ಸರ್ವ ಸಾಮಾನ್ಯ ಹೋಲಿಕೆಯಿರುವಂತೆ ಕಾಣುತ್ತದೆ. 'ಪದ್ಧತಿಕೆ' ಇದು ರಗಳೆಯ ಒಂದು ಪ್ರಕಾರಕ್ಕೆ ಸಂಸ್ಕೃತ ಪದವಾಗಿರುವುದರಿಂದ ಚತ್ತಾಣ ಮತ್ತು ಬಾಜನೆಗಬ್ಬಗಳಲ್ಲಿ ಇಂಥ ರಚನೆಗಳ ಸೇರ್ಪಡೆಯಾಗಿರಬೇಕು. ಅಕ್ಷರವೃತ್ತ ಮತ್ತು ಅಂಶಗಣಘಟಿತ ತ್ರಿಪದಿ, ಅಕ್ಕರ ಮುಂತಾದವುಗಳೊಡನೆ ಮಾತ್ರಾನಿಯತವಾದ ಕಂದ ಮತ್ತು ರಗಳೆ ಇವು ಸೇರಿಕೊಂಡು ಅಂದಂದಿನ ಕಾವ್ಯಕೃತಿಗಳ ವೈವಿಧ್ಯವನ್ನು ಹೆಚ್ಚಿಸಿರಬೇಕು.

### 1.2.1 ರಗಳೆ ಸ್ವರೂಪ

ಪ್ರತ್ಯಕ್ಷವಾಗಿ ರಗಳೆ ಒಂದು ಛಂದೋಬಂಧವಾಗಿ ಮೊಟ್ಟಮೊದಲು ಪಂಪನ ಆದಿಪುರಾಣದಲ್ಲಿ ನಮ್ಮ ಕಣ್ಣಿಗೆ ಬೀಳುತ್ತದೆ. ಅದು ಮಂದಾನಿಲ ರಗಳೆ ಎಂಬ ಹೆಸರು ಗೊಂಡು ಆ.ಪು.೪-೩೦ ವ.ದ. ತರುವಾಯ, ಲಲಿತರಗಳೆ ಎಂಬ ತಲೆಕಟ್ಟಿನಲ್ಲಿ ಆ.ಪು. ೭-೨೭ ವ.ದ. ತರುವಾಯ, ಹೀಗೆ ಎರಡುಕಡೆ ಬಂದಿದೆ. ಮೊದಲನೆಯದರಲ್ಲಿ ೧೬ ಮಾತ್ರೆಗಳುಳ್ಳ ಎರಡು ಪಾದಗಳಿಂದ ಕೂಡಿದ ದ್ವಿಪದಿಗಳು ಒಟ್ಟು ೧೬ ಇರುತ್ತವೆ ಅಂದರೆ ೩೨ ಪಾದಗಳಿರುತ್ತವೆ. ದ್ವಿತೀಯಾಕ್ಷರ ಪ್ರಾಸವಿಲ್ಲ, ಅಂತ್ಯಪ್ರಾಸವು ಒಂದೊಂದು ದ್ವಿಪದಿಗೆ ಬೇರೆಯಾಗಿ ತಪ್ಪದೆ ಇದೆ. ಪ್ರಾಕೃತಪಜ್ಝಟಿಕೆಯಂತೆ ಎಲ್ಲ ನಡೆಯಿದೆ. ಪ್ರತಿಪಾದದ ೧೬ ಮಾತ್ರೆಗಳು ಆಂತರಿಕವಾಗಿ ನಾಲ್ಕುನಾಲ್ಕು ಮಾತ್ರೆಯ ನಡೆಯನ್ನು ಹೊಂದಿದ್ದರೂ ಹಾಗೆ ಗಣವಿಭಾಗ ಮಾಡಿದರೆ ಕೃತಕ ವಿಭಜನೆಯಾಗುತ್ತದೆ, ಜಗಣಗಳು ಎದ್ದು ಕಾಣುತ್ತವೆ. ಎಂಟೆಂಟರಂತೆ ಮಾಡಿದರೆ.

ಮತ್ತು ೫+೩, ೩+೫,೨+೩+೩ ಹೀಗೆ ಎಂಟು ಮಾತ್ರೆಗಳ ಒಳಹಂಚಿಕೆ ಯನ್ನು ಮಾಡಿದರೆ ವಿಭಜನೆಯ ಕೃತಕತೆಯನ್ನು ಕುಂದಿಸಬಹುದು. ಅದನ್ನು ಪೂರ್ತಿಯಾಗಿ ತಪ್ಪಿಸಲು ಮಾತ್ರ ಬರುವುದಿಲ್ಲ. ಉದಾಹರಣೆಗೆ, ಮೊದಲನೆಯ ಎಂಟು ಸಾಲುಗಳನ್ನು ನೋಡಬಹುದು.

ಸ್ಫುರಿತೇಂದ್ರ ನೀಲ| ಮಣಿಖಚಿತ ಭೂಮಿ
ತೆಲುವಿಂಗದು ನೆ| ಟ್ಟನೆ ಜನ್ಮಭೂಮಿ
ಮರಕತಮಣಿವಿರ| ಚಿತ ವಿಮಳ ಭಿತ್ತಿ
ಪೊಗಟಲ್ಕರಮರಿ| ದದು ಬೇಡೆ ಭಿತ್ತಿ
ಪಳುಕಿನ ಕಂಭಂ|ಗಳ ಪೊಳೆವ ಪೊಳೆಪು
ನವವಿದ್ಯುದ್ದಾ| ಮದ ಪೊಳೆವ ಪೊಳೆಪು
ಲಲಿತೋನ್ನತಮಣಿ | ಮಯಕೂಟದಂದ
ಮದುಪಲವುಂ ದೇ| ಸೆಯ ಮಾಟದಂದ

ಈ ಎಂಟುಸಾಲುಗಳಲ್ಲಿ ಪ್ರತಿಯೊಂದು ಎಂಟೆಂಟು ಮಾತ್ರೆಗಳ ಗಣವಿಭಾಗ ಹೊಂದಿದರೂ ಶಬ್ದಗಳ ಒಡೆತ ಅಸಹಜವಾಗಿರುವುದೇ ಹೆಚ್ಚು. 'ಸ್ಫುರಿತೇಂದ್ರ ನೀಲ| ಮಣಿ ಖಚಿತ ಭೂಮಿ, ಲಲಿತೋನ್ನತ -ಮಣಿ|ಮಯ ಕೂಟದಂದ' ಈ ಸಾಲುಗಳಲ್ಲಿ ಸಮಸ್ತಪದಗಳ ಅವಯವಗಳು ಇಡಿಯಾಗಿ ಒಂದೊಂದು ಕಡೆ ಬಂದಿರುವುದರಿಂದ ಅಸಹಜತೆ ಇಲ್ಲ. ಆದರೆ 'ಚೆಲುವಿಂಗದುನೆ|ಟ್ಟನೆ ಜನ್ಮಭೂಮಿ, ಮದು ಪಲವುಂದೆ| ಸೆಯ ಮಾಟದಂದ' ಇವುಗಳಲ್ಲಿ ಒಡೆತವು ಒಡೆದು ಕಾಣುತ್ತದೆ. ಇದು ರಗಳೆಯ ರಚನೆಯಲ್ಲಿ ಪಂಪನು ಮಾಡಿರುವ ಪ್ರಥಮ ಪ್ರಯೋಗವಾಗಿರುವುದರಿಂದ ಈ ಊಣೆಯವು ಉಳಿದಿರಬಹುದು. ಬಹುಶಃ ವೇಗವೇಗವಾಗಿ ಇದನ್ನು ಹೇಳುವುದರಿಂದ ಇಲ್ಲವೆ ಹಾಡುವುದರಿಂದ ಕೊರತೆಯನ್ನು ತುಂಬಿಕೊಳ್ಳುವುದು ಸಾಧ್ಯ. ಜನಪದ ಸಾಹಿತ್ಯದಲ್ಲಿ ಇಂಥ ಮಟ್ಟಗಳನ್ನು ಹಾಡುವ ರೀತಿಯನ್ನು ಪಂಪನು ಕೇಳಿ ಆದರಿಂದ ಪ್ರಭಾವಿತನಾಗಿರಬಹುದು. ಎಂಟೆಂಟರ ಗಣಗಳಲ್ಲಿ ಅಂತರಿಕವಾಗಿ ಗಣಪರಿವೃತ್ತಿ ಸಾಕಷ್ಟು ವೈವಿಧ್ಯವನ್ನು ತೋರಿಸಿದೆ. ಇಲ್ಲಿ ಉದಾಹರಿಸಿದ ಎಂಟು ಸಾಲುಗಳಲ್ಲಿ ಅದನ್ನು ಗುರುತಿಸಬಹುದು. ಅಂತ್ಯಪ್ರಾಸದಲ್ಲಿ ಅದೇ ಶಬ್ದಗಳ ಪುನರುಕ್ತಿ ಹೆಚ್ಚಾಗಿರುವುದರಿಂದ ಅವರಲ್ಲಿ ಹೇಳಿಕೊಳ್ಳುವಂಥ ಸೊಗಸಿಲ್ಲ.

ಸಂಸ್ಕೃತದ ಪದ್ಧತಿ (ಕಾ), ಪ್ರಾಕೃತದ ಪಜ್ಝಟಿಕಾ, ಪದ್ದಡಿ, ಕನ್ನಡದ ಪದ್ದಳಿ, ಪಡ್ಡಳಿ ಇವೆಲ್ಲಾ ಮಂದಾನಿಲರಗಳೆಯ ನಾಮಭೇದಗಳು ಮಾತ್ರ. ಇದರ ಲಕ್ಷಣ ವೆಂದರೆ ಪ್ರತಿಪಾದದಲ್ಲಿ ನಾಲ್ಕು ಮಾತ್ರೆಗಳ ನಾಲ್ಕು ಗಣ, ಕೊನೆಯ ಗಣ ಜಗಣ ಅಂದರೆ ಮಧ್ಯಗುರುಯುಕ್ತ ಗಣ ಆಗಿರಬೇಕು. ಎರಡನೆಯ ಗಣವೂ ಈ ಜಗಣವಾಗಿರಬಹುದು. ಕೊನೆಯ ಜಗಣಕ್ಕೆ ಬದಲು ಸರ್ವ ಲಘುವುಳ್ಳ ಗಣ ಪರ್ಯಾಯವಾಗಿ ಬರಬಹುದು. ಈ ಲಕ್ಷಣವನ್ನು ಶಾಂತಿನಾಥನು ತಾನು 'ಪದ್ದಳಿ' ಎಂದು ಕರೆದಿರುವ ೮-೬೬ರಲ್ಲಿ ಪೂರ್ತಿಯಾಗಿ ಮತ್ತು ತಾನು 'ರಗಳೆ' ಎಂದು ಹೆಸರಿಸಿರುವ ೧೦-೬೭ರ ಬಹುಭಾಗದಲ್ಲಿ ಅನುಸರಿಸಿದ್ದಾನೆ. ಆದರೆ ರಗಳೆ ಮತ್ತು ಆದ್ಯಂತ ಪ್ರಾಸದ ರಗಳೆ ಎಂದು ಅನುಕ್ರಮವಾಗಿ ತಾನು ಅಭಿಧಾನಿಸಿದ ೫-೫೧ ಮತ್ತು ೧೦-೫೬ ಇವುಗಳಲ್ಲಿ ಕೊನೆಯ ಜಗಣನಿಯಮವನ್ನು ಪಾಲಿಸಿಲ್ಲ. ಜಗಣದ ಹೊರತಾಗಿ ಎರಡು ಗುರು ಅಥವಾ ೧ ಗುರು ಎರಡು ಲಘು ಹೀಗೆ ೪ ಮಾತ್ರೆಗಳಾಗುವ ಪ್ರಭೇದಗಳನ್ನೆಲ್ಲ ತಂದಿದ್ದಾನೆ ಎಂಬುದನ್ನು ಗಮನಿಸಬೇಕು. ಪದ್ಧತಿ ಅಥವಾ ಪಜ್ಝಟಿಕೆ ಇದು ಕನ್ನಡದಲ್ಲಿ ಹೊಂದುತ್ತ ಬಂದ ಮಾರ್ಪು ಪಂಪನಲ್ಲಿ ಮೊದಲು ತಲೆದೋರಿ ಇಲ್ಲಿ ಅದು ನಿಚ್ಚಳ ವಾಗಿದೆ. ಪಂಪನ 'ಸ್ಫುರಿತೇಂದ್ರನೀಲಮಣಿಖಚಿತಭೂಮಿ' ಮುಂತಾದ ಮಂದಾನಿಲ ರಗಳೆ ಶುದ್ಧ 'ಪದ್ಧತಿ' ಯಂತಿದ್ದರೆ 'ಅಲ್ಲಿ ಸೊಗಯಿಸುವ ಕೃತಕ ಗಿರಿಗಳಿಂ' ಇರದಲ್ಲಿ ಅದು ಕನ್ನಡದಲ್ಲಿ ಹೊಂದಿರುವ ಮಾರ್ಪು ಕಾಣುತ್ತದೆ. ಶಾಂತಿನಾಥನಲ್ಲಿ ೧೦-೬೭ ಬಹುಭಾಗದಲ್ಲಿ ಪದ್ಧತಿಯಂತಿದ್ದರೂ ಅದು ಪೂರ್ತಿಯಾಗಿ ಹಾಗಿಲ್ಲ. ಉದಾಹರಣೆಗೆ.

ಚಂಚನ್ಮಣಿಗಣಪರಿಖಚಿತಭೂಮಿ

ಸಂದಿರ್ದಧರೀಕೃತ ಭೋಗಭೂಮಿ

ಈ ಸಾಲುಗಳಿಂದ ಮೊದಲಾಗಿ ಅರ್ಧಕ್ಕೆ ಮೇಲ್ಪಟ್ಟು ಅಂತ್ಯ ಜಗಣಗಳಿಂದ ಕೂಡಿದ್ದು ಆಮೇಲೆ

ದಂಪತಿಯಂ ಪೋ ಬರವೇಟೆಂಬ

ತಱದಿಂ ಸೊಗಯಿಸಿದುದು ಕಣ್ಗಳುಂಬ

ಎಂಬ ಪಾದಗಳು ನಡುನುಸುಳಿ ಮತ್ತೆ ಜಗಣ ಅಥವಾ ನಾಲ್ಕು ಲಘು ಬಂದಿವೆ. ನಯಸೇನನ ಧರ್ಮಾಮೃತದಲ್ಲಿ ಮೂರು ಕಡೆ ರಗಳೆ ಬಂದಿದೆ. ಅವುಗಳಲ್ಲಿ ಒಂದು ೬೬ ಸಾಲುಗಳುಳ್ಳ ಲಲಿತರಗಳೆ (೯-೨೪೧), ಎರಡು ಮಂದಾನಿಲರಗಳೆ - ೧೫ ಪಂಕ್ತಿಯದೊಂದು (೧೪-೧೩೫), ೪೮ ಪಂಕ್ತಿಯದಿನ್ನೊಂದು (೧೪-೧೬೧). ಲಲಿತರಗಳೆಯ ಪದ್ಯವು ರಚನೆಯಲ್ಲಿ ತೀರ ಸರಳವಾಗಿದೆ. ಆದಿಪ್ರಾಸವಿಲ್ಲ, ಅಂತ್ಯಪ್ರಾಸವೂ ಕಡ್ಡಾಯವಾಗಿಲ್ಲ. ಇಂದಿನ ಸರಳರಗಳೆಗೆ ಹತ್ತಿರವಿರುವಂತೆ ಕೆಲವು ಸಾಲುಗಳಿವೆ. ದ್ವಿಪದಿಯಂತೆ ಜೋಡಣೆ ಕಡಿಮೆಯಾಗಿರುವುದು ಇದರ ವಿಶೇಷ. ಮಂದಾನಿಲರಗಳೆಯ ಎರಡ^ ಜಯಕಾರಗಳಾಗಿವೆ. ಒಂದರಲ್ಲಿ 'ಜಯ'ಆದಿಯಲ್ಲಿ, ಇನ್ನೊಂದರಲ್ಲಿ 'ಜಯ' ಅಂತ್ಯದಲ್ಲಿ. ಮೊದಲನೆಯದು ಪಜ್ಝಟಿಕೆಯ ಧಾಟಿಯಲ್ಲಿದೆ, ಎರಡನೆಯದರಲ್ಲಿ ಅದೂ ಇದೂ ಸೇರಿದ ಸಂಮಿಶ್ರತೆಯಿದೆ. ಪಂಪ, ಶಾಂತಿನಾಥ ಇವರ ಕೆಲವು ಮಂದಾನಿಲ ರಚನೆಗಳಲ್ಲಿರುವಂತೆ ವ್ಯತ್ಯಾಸವಿದೆ.

ರಗಳೆ ಇದು ಅಚ್ಚಗನ್ನಡ ಛಂದೋರೂಪವೇ ಅಥವಾ ಸಂಸ್ಕೃತ, ಪ್ರಾಕೃತ ಛಂದಸ್ಸಿನ ವರ್ಚಸ್ಸಿನ ಫಲವೇ, ರಗಳೆ ಈ ಶಬ್ದದ ನಿಷ್ಪತ್ತಿಯೇನು ಎಂಬ ಪ್ರಶ್ನೆಗಳ ಚರ್ಚೆ ಸಾಕಷ್ಟು ಆಗಿದೆ. ಅದರ ವಿಸ್ತಾರವಾದ ಪರಿಶೀಲನೆಗಿದು ಸಂದರ್ಭವಲ್ಲ. ಆದರೆ ಒಂದೆರಡು ಅಂಶಗಳನ್ನು ಗಮನಿಸುವುದು ಅವಶ್ಯ. ಮಂದಾನಿಲರಗಳೆಯ ಒಂದು ಒಂದೆರಡು ಅಂಶಗಳನ್ನು ಗಮನಿಸುವುದು ಅವಶ್ಯ. ಮಂದಾನಿಲರಗಳೆಯ ಒಂದು ಪ್ರಕಾರವು ಪ್ರಾಕೃತದ ಪ್ರಭಾವದಿಂದ ರೂಪಗೊಂಡಿರುವುದು ನಿಜ. ಪದ್ಧಳಿ, ಪಡ್ಡಳಿ ಎಂದು ಹೆಸರಿಟ್ಟುಕೊಂಡು ಬಂದಲ್ಲಿ ಅದು ಸ್ಪಷ್ಟವಾಗಿದೆ. ಹಾಗೆ ಹೆಸರಿರದೆ ರಗಳೆ ಎಂದಿರುವಾಗಲೂ ಈ ಪ್ರಕಾರ ಬಂದಿದೆ. ಆದರೆ ಮಂದಾನಿಲರಗಳೆಯ ಇನ್ನೊಂದು ಪ್ರಕಾರವೂ ತಲೆಯೆತ್ತಿತೆಂಬುದನ್ನು ನೋಡಿದ್ದೇವೆ. ಅಲ್ಲದೆ ೩ ಮತ್ತು ೫ ಮಾತ್ರೆಗಳ ಗುಣವುಳ್ಳ ಉತ್ಸಾಹ ಮತ್ತು ಲಲಿತರಗಳೆಗಲು, ಜೊತೆಗೆ ಉತ್ಸಾಹದ ಬಿತ್ತರಣೆಗಳು ಪಂಪನ ಕಾಲದಿಂದಲೂ ನಿದರ್ಶಿತವಾಗಿವೆ. ಇವಕ್ಕೆ ಪ್ರಾಕೃತಮೂಲವಿಲ್ಲ. ಕನ್ನಡ ಜನಪದ ಸಾಹಿತ್ಯದಲ್ಲಿ ತ್ರಿಪದಿಯ ಹಲವು ಆವಿಷ್ಕಾರಗಳಂತೆ ರಗಳೆಯ ಕೆಲವು ಆವಿಷ್ಕಾರಗಳೂ ಇದ್ದಿರಬಹುದು. ಪಂಪನ ರಚನೆಗಳಲ್ಲಿ ಜಾನಪದ ಪ್ರಭಾವವನ್ನು ನಾವು ಗುರುತಿಸಿದ್ದೇವೆ. ಇದರಿಂದ ಮುಖ್ಯವಾಗಿ ರಗಳೆ ಇದು ಅಚ್ಚಗನ್ನಡ ಜಾನಪದ ಛಂದೋರೂಪವಿರ ಬೇಕೆಂದೂ ಅದು ಹಲವು ಟಿಸಿಲಾಗಿ ಬೆಳೆಯಿತೆಂದೂ ಮಾರ್ಗ ಕಾವ್ಯದಲ್ಲಿ ಅದೇ ಶಿಷ್ಟಭಾಷೆಯಲ್ಲಿ ಜನ್ಮತಾಳಿತೆಂದೂ ಹೇಳಬಹುದು. ರಗಳೆ ಇದು 'ರಘುಟಾ' ಎಂಬ ಸಂಸ್ಕೃತಶಬ್ದದ ಅಪಭ್ರಂಶವೆಂಬುದು ತಿರುವುಮುರುವಾದ ಮಾತು. ರಗಳೆ ಎಂಬ ದೇಶ್ಯಶಬ್ದವು ಪಾದಗಳ ಅನಿರ್ಬಂಧವುಳ್ಳ ಪದ್ಯವಿಸ್ತಾರಕ್ಕೆ ಬಹು ಹಿಂದಿ ನಿಂದ ರೂಢವಾದ್ದಿರಬೇಕು. ಅದರ ಸಂಸ್ಕೃತೀಕರಣವೇ ' ರಘುಟಾ'ಎಂಬುದು. ಸಂಸ್ಕೃತದಲ್ಲಿ ರಘುಟಾ ಇದಕ್ಕೆ ಯಾವ ಬೇರೆ ಆಧಾರವೂ ಇಲ್ಲ, ನಿಷ್ಪತ್ತಿಯೂ ಇಲ್ಲ. ಅದನ್ನು ಕಂಡುಹಿಡಿಯುವ ಪ್ರಯತ್ನಗಳೆಲ್ಲ ಎಳೆದಾಟಗಲೇ ಆಗಿವೆ ಎಂದು ನಮ್ಮ ತೋರಿಕೆ. ಒಟ್ಟಿನಲ್ಲಿ ನಮ್ಮ ಚಂಪೂಕಾವ್ಯಗಳಲ್ಲಿ ದೇಶ್ಯಛಂದಸ್ಸಿನ ತ್ರಿಪದಿ, ಅಕ್ಕರ, ಷಟ್ಪದಿಗಳು ಬಂದಿರುವಂತೆ ರಗಳೆಯೂ ಬಂದು ವೈವಿಧ್ಯವನ್ನು ಹೆಚ್ಚಿಸಿದೆ ಮಾತ್ರವಲ್ಲ, ಸಂದರ್ಭೌಚಿತ್ಯವನ್ನೂ ಸಾಧಿಸಿದೆ ಎನ್ನಬಹುದು. ಅದರ ಒಂದು ಪ್ರಕಾರವು ಮಾತ್ರ ಪ್ರಾಕೃತದಿಂದ ಪ್ರಭಾವಿತವಾಗಿದೆ ಎಂಬದನ್ನು ಮಾತ್ರ ಒಪ್ಪಿಕೊಳ್ಳಬೇಕು.

ರಗಳೆ ಚಂಪೂಕಾವ್ಯಗಳಲ್ಲಿ 'ವರ್ಣಕ'ವಾಗಿ ಸುಳಿದು ಸಾರ್ಥಕತೆಯನ್ನು ಪಡೆಯುತ್ತ ಸಾಗಿತಾದರೂ ಅದೊಂದು ಸಾಹಿತ್ಯರೂಪವಾಗಿ ತಲೆಯೆತ್ತಿದ್ದು ಹರಿಹರನ ರಗಳೆಗಳಲ್ಲಿಯೇ. ರಗಳೆಗೆ ಹತ್ತಿರಹತ್ತಿರವಾದ

ರಚನೆ ಕೆಲವು ವಚನಕಾರರ ಹಾಡುಗಳಲ್ಲಿ ಕಂಡು ಬರುತ್ತದೆ. ಉದಾಹರಣೆಗೆ, ಚೆನ್ನ ಬಸವನ ಮಂತ್ರ ಗೋಪ್ಯದಲ್ಲಿಯ

'ಮುಟ್ಟಿದಲ್ಲಿ ಮುಟ್ಟದಲ್ಲಿ ತೊಟ್ಟುಬಿಟ್ಟ ಹಣ್ಣಿನಂತೆ
ಬಟ್ಟಬಯಲು ತುಟ್ಟತುದಿಯ ಮೆಟ್ಟನಿಂದನು'

ಈ ಸಾಲುಗಳಲ್ಲಿ ಉತ್ಸಾಹರಗಳೆಯ ಲಯವಿಶೇಷವಿದೆ. ಪ್ರಭುದೇವನ ಮಂತ್ರ ಗೋಪ್ಯದ 'ಹೆಜ್ಜೆಯಿಲ್ಲದ ಮೃಗವು ಹಲವು ದ್ವೀಪಕೆ ಹೋಗಿ | ವೆಜ್ಜವಿಲ್ಲದ ಮಣಿಯ ನೋಡಿ ಕಂಡು| ಪ್ರಜ್ವಲಿಸಿ ಬೆಳಗುವಾ ರಚನೆಯಲಿ ಹೊಸೆದು| ವೆಜ್ಜವಿಲ್ಲದ ಮಣಿಯ ಪವಣಿಸಿದನು||' ಈ ಸಾಲುಗಳು ಲಲಿತರಗಳೆಗೆ ಸಮೀಪವರ್ತಿಯಾಗಿವೆ.

ಹರಿಹರನ ರಗಳೆಗಳಲ್ಲಿ ಭಕ್ತಿ ಪಥನಕ್ಕೆ ಅಖಂಡವಾಹಕವಾಗಿ ಒಂದು ಸಾಹಿತ್ಯ ರೂಪವು ಜನ್ಮತಾಳೀತು. ಅದರಲ್ಲಿ ರಗಳೆಯ ಮೂರು ಪ್ರಮುಖ ಲಯಗಳು ಬೇರೆ ಬೇರೆ ಚರಿತೆಗಳಿಗೆ ಮೀಸಲಾದುವು. ಒಂದು ಸ್ಥಲ ಪದ್ಯ, ಒಂದು ಸ್ಥಲ ಗದ್ಯವಾಗಿ ಕೆಲವು ರಗಳೆಗಳಲ್ಲಿ ಒಂದು ಹೊಸ ಬಗೆಯ 'ಚಂಪು' ಕನ್ನಡ ಸಾಹಿತ್ಯದ ಕ್ಷಿತಿಜದಲ್ಲಿ ತೇಲಿ ಬಂದಿತು. ತನ್ನದೇ ಆದ ಹೊಳಪಿನಿಂದ ನೂರಾರು ಕಿರಣಗಳನ್ನು ಎಸೆದು ಹರಿಹರನ ರಗಳೆ ಸಹೃದಯರ ಮನಸೆಳೆಯಿತು. ಮುಂದೆ ಅದರಂಥ ಹೊಗರು ಬೇರೆಲ್ಲಿಯೂ ಕಾಣಲಿಲ್ಲ. ರಗಳೆಯ ಅಧ್ಯಯನದಲ್ಲಿ ಅದರ ಜೀವಾಳದ ಅರಿವು, ಸಿದ್ಧಿ-ಅಸಿದ್ಧಿಗಳ ಅಳತೆ ಬಹುಮುಖ್ಯವಾದ ಭಾಗವಾಗಿದೆ.

### 1.2.2 ರಗಳೆ ಪ್ರಬೇಧಗಳು

ಹರಿಹರನ ರಗಳೆಗಳು ಗಾತ್ರದಲ್ಲಿ ಹೆಚ್ಚು ಕಡಮೆಯಾಗಿರುತ್ತವೆ : ಕೆಲವು ತೀರ ಚಿಕ್ಕವು, ಕೆಲವು ಮಧ್ಯಮ, ಕೆಲವು ದೊಡ್ಡವು. ಅವುಗಳಲ್ಲಿ ಸ್ವಲ್ಪ ಮಾತ್ರ ಗದ್ಯಪದ್ಯ ಮಿಶ್ರ, ಉಳಿದುವು ಕೇವಲ ಪದ್ಯ. ಒಂದು ಮಾತ್ರ ಕೇವಲ ಗದ್ಯವೆಂದು ತಿಳಿದಿದೆ. ಛಂದಸ್ಸಿನ ದೃಷ್ಟಿಯಿಂದ ಲಲಿತರಗಳೆಯಲ್ಲಿ ರಚಿತವಾದುವೇ ಹೆಚ್ಚು. ಉಳಿದುವು ಮಂದಾನಿಲ ಮತ್ತು ಉತ್ಸಾಹದಲ್ಲಿವೆ. ಈಶ್ವರನ್ ಅವರು ಹರಿಹರಕೃತವೆಂದು ನಿರ್ಧರಿಸಿರುವ ೧೦೬ ರಲ್ಲಿ ೮೨ ಲಲಿತ, ೧೬ ಮಂದಾನಿಲ, ೮ ಉತ್ಸಾಹ. ಹಳಕಟ್ಟಿಯುವರು ಪ್ರಕಟಿಸಿದ ೪೬ರಗಳೆಗಳಲ್ಲಿ ೩೪ ಲಲಿತ, ೭ ಮಂದಾನಿಲ, ೫ ಉತ್ಸಾಹ ಇರುತ್ತವೆ. ಅವುಗಳಲ್ಲಿ ೯ ಗದ್ಯಪದ್ಯ ಸಂಮಿಶ್ರವಾಗಿವೆ. ಇತರರು ಪ್ರಕಟಿಸಿದ ಬಸವರಾಜದೇವರ ರಗಳೆ, ನಂಬಿಯಣ್ಣನ ರಗಳೆ, ಮಹಾದೇವಿಯಕ್ಕನ ರಗಳೆ ಇವನ್ನು ಸೇರಿಸಿದರೆ ಸಂಮಿಶ್ರ ರಗಳೆಗಳು ೧೨ ಆಗುತ್ತವೆ. ದೇವೀರಪ್ಪನವರ ಶರಣಚರಿತಮಾನಸದಲ್ಲಿ ಬಂದಿರುವ ವಾಗೀಶದೇವರ ರಗಳೆಯೂ ಕೂಡ ಸಂಮಿಶ್ರವಾಗಿದೆ. ಪ್ರಕಟಿತವಾಗದೆ ಉಳಿದ ಬೇರೆ ಕೆಲವದರಲ್ಲಿಯೂ ಸಂಮಿಶ್ರತೆ ಇರಬಹುದು. ಅವುಗಳ ಗಾತ್ರ ವೈವಿಧ್ಯವನ್ನು ಅರಿತುಕೊಳ್ಳಲು ಪುಟ ೧೬೬ರಲ್ಲಿ ಕೊಟ್ಟ ವಿವರಗಳು ನೆರವಾಗುತ್ತವೆ.

ಮೊದಲಿನ ಮೂರನ್ನು ಬಿಟ್ಟರೆ ಉಳಿದುವೆಲ್ಲ ಗಾತ್ರದಲ್ಲಿ ಚಿಕ್ಕವಾಗಿವೆ. ಅದರಲ್ಲಿಯೂ ೨ ಪದ್ಯ ಮತ್ತು ೧ ಗದ್ಯ ಹೀಗೆ ಒಟ್ಟು ಮೂರಾಗಿರುವುವೇ ೮ ಇವೆ.

### 1.2.3 ಹರಿಹರನ ರಗಳೆಗಳ ಸಾರ್ಥಕ್ಯ

ಹರಿಹರನು ಒಂದು ಛಂದೋರೂಪವಾಗಿದ್ದ ರಗಳೆಯನ್ನು ಸಾಹಿತ್ಯರೂಪವಾಗಿ ಮಾಡಿಕೊಂಡದ್ದು ಬರೀ ಸಾಹಸದ ಆಕಾಂಕ್ಷೆಯಿಂದಲ್ಲ. ಅವನ ಸಮಸ್ತ ಚೇತನವು ಒಂದು ಹೊಸ ಅಭಿವ್ಯಕ್ತಿ ಮಾಧ್ಯಮವನ್ನು ತನ್ನ ವಿಶಿಷ್ಟ ಆಶಯಕ್ಕೆ ಹುಡುಕುತ್ತಿರ ಬೇಕು. ಅದೇ ರಗಳೆಯಾಗಿ ಒಡಮೂಡಿ ಬಂದು ಅವನ ಎಲ್ಲ ನಿರ್ಮಿತಿಗೆ ಸ್ವಂತಿಕೆಯನ್ನೂ ಸಾರ್ಥಕ್ಯವನ್ನೂ ಒದಗಿಸಿಕೊಟ್ಟಿತು. ಅವನ ರಗಳೆಗಳನ್ನು ಓದುವಾಗ ಈ ಅರಿವು ಸಹೃದಯನಲ್ಲಿ ಉಂಟಾಗುತ್ತದೆ, ಸಾಹಿತ್ಯಿಕ ಮೂಲ್ಯದಲ್ಲಿ ಏರಿಳಿತಗಳು ಕಂಡು ಬಂದರೂ ಕವಿಜೀವವು ತನಗೆ ತಕ್ಕ ಆಕೃತಿಯನ್ನು ಪಡೆದಿದೆ ಎಂಬ ಸಮಾಧಾನವೂ ಸಂತೋಷವೂ

ತುಂಬಿ ಬರುತ್ತವೆ. ಕನ್ನಡ ಸಾಹಿತ್ಯದ ಚರಿತ್ರೆಯಲ್ಲಿ ವಚನಕಾರರ ತರುವಾಯ ವ್ಯಕ್ತಿತ್ವಸಂಪನ್ನರಾದ ಕವಿಗಳಲ್ಲಿ ಅಭಿವ್ಯಕ್ತಿ ಮಾಧ್ಯಮದ ಔಚಿತ್ಯ ಮತ್ತು ಸಾರ್ಥಕ್ಯ ಇವನ್ನು ಒಟ್ಟಿನಲ್ಲಿ ಎದ್ದು ಕಾಣುವಂತೆ ಹರಿಹರನೊಬ್ಬನೇ ಮೆರೆದಿರುವನೆಂದರೆ ಅತಿಶಯೋಕ್ತಿಯಾಗದು. ಆದರೆ ಈ ಔಚಿತ್ಯ, ಸಾರ್ಥಕ್ಯ ಯಾವುದರಲ್ಲಿದೆ, ಅದನ್ನು ಬೆರಳಿಟ್ಟು ತೋರಿಸಬಲ್ಲೆವೇ, ವಿಂಗಡಿಸಬಲ್ಲೆವೇ ಎಂಬ ಪ್ರಶ್ನೆಗೆ ಉತ್ತರವು ಸುಲಭವಲ್ಲ. ಒಂದು ಸಮಗ್ರ ಕೃತಿಯ ಇಡಿತನದಲ್ಲಿ ಅದು ಹಿಡಿತಕ್ಕೆ ಸಿಕ್ಕದೆ ವಿಶ್ಲೇಷಣೆಯ ಚುರುಕಾದ ಕೈಯಿಂದಲೂ ಜಾರಿಹೋಗಬಹುದು. ವಿಶ್ಲೇಷಣೆಗೆ ತೊಡಗಿದರೆ ಒಂದು ಚೆಲುವಾದ ಹೂವಿನ ಎಸಳುಗಳನ್ನೋ ಒಂದು ಚಂದಾದ ಚಿಟ್ಟೆಯ ಪಕ್ಕಗಳನ್ನೋ ಕಿತ್ತಿ ತೋರಿಸುವ ಪ್ರಯತ್ನದಂತೆ ಅದು ಆಗಬಹುದು. ಆದರೂ ವಿಶ್ಲೇಷಣ ಪ್ರಯತ್ನ ಸಾಧ್ಯವಿರುವಷ್ಟು ನಡೆಯಬೇಕಾದ್ದು ಅವಶ್ಯ.

ಈವರೆಗೆ ನೆಡದ ಕೆಲವು ಯತ್ನಗಳನ್ನು ಮೊದಲು ನೋಡೋಣ. ಲಲಿತರಗಳೆಯ ಭಾವಮೂಲ್ಯವನ್ನು ತಿಳಿಸುತ್ತ ಡಾ. ಕರ್ಕಿಯವರು 'ಲಲಿತರಗಳೆಯ ಗತಿ ನಿಧಾನ ವಾದುದು; ಬಾವ ಮತ್ತು ನಾದ ತುಂಬುಹೊಳೆಯಾಗಿ ಹರಿಯುವುದಕ್ಕ ಲಲಿತದಷ್ಟು ಅನುಕೂಲವಾದ ಛಂದೋಬಂಧ ಬೇರೊಂದಿಲ್ಲವೆಂದೇ ಹೇಳಬಹುದು. ಕಥೆ ಸರ್ವಾಂಗ ಸುಂದರವಾಗಿ ನಿರ್ಮಾಣವಾಗುವುದಕ್ಕೆ ಅದರಲ್ಲಿ ಆಸ್ಪದವುಂಟು. ಹರಿಹರದೇವನು ಲಲಿತರಗಳೆಯಲ್ಲಿ ತಳೆದ ಪಕ್ಷಪಾತದ ರಹಸ್ಯವು ಇದೇ.' ಉದಾಹರಣೆಯಾಗಿ 'ಅಳಿಯೆಱಗದನಿಲನಲುಗದ ರವಿಕರಂ ಪುಗದ' ಮುಂತಾದ ಸಾಲುಗಳನ್ನು ಎತ್ತಿ ತೋರಿದ್ದಾರೆ. ಇದು ಸಾಮಾನ್ಯ ಪ್ರಶಂಸೆ ಎಂಬ ದೃಷ್ಟಿಯಿಂದ ಸರಿ. ಕೊಟ್ಟ ಉದಾಹರಣೆ ಕಥನಗತಿಗಿಂತ ವರ್ಣನಾರೀತಿಯನ್ನು ಸೂಚಿಸುತ್ತದೆ. ಡಾ. ಹಿರೇಮಲ್ಲೂರ ಈಶ್ವರನ್ ಅವರು ಸಂಖ್ಯಾನಿರ್ಣಯದ ಸಂದರ್ಭದಲ್ಲಿ ಹರಿಹರನ ರಗಳೆಗಳ ಛಂದಸ್ಸನ್ನು ಸಮೀಕ್ಷಿಸುತ್ತ 'ಹರಿಹರನನ್ನು' 'ರಗಳೆಯ ಕವಿ'ಯೆಂದು ಆ ಕಾಲದ ಪಂಡಿತವರ್ಗ ಹೀಗಳೆದರೂ ಹರಿಹರನು ಹಿಂಜರಿಯದೆ ಜಾನಪದ ಛಂದಸ್ಸೆನಿಸಿದ್ದ ರಗಳೆಯನ್ನು ತನ್ನ ಸಾಹಿತ್ಯಗಂಗೆಗೆ ತೊಡಿಸಿ ಗೌರವಿಸಿದನು.... ಉದ್ದಕ್ಕೂ ತಡೆಯಿಲ್ಲದೆ ಕಥೆ ಮುಂದುವರಿಯಬೇಕಾದರೆ ಪೂರ್ತಿಯಾಗಿ ಮಾತ್ರಾ ಘಟಿತ ರಗಳೆಗಳೇ ಉಚಿತವೆಂದು ಅವನಿಗೆ ತೋರಿರಬೇಕು. ಅದರಲ್ಲಿಯೂ ಹರಿಹರನಿಗೆ ಲಲಿತರಗಳೆಯ ಪಂಚಮಾತ್ರಗಣದ ಗಂಭೀರಗತಿ ಕಥನಕ್ಕೆ ಹೆಚ್ಚು ಆವಶ್ಯಕ ಹಾಗೂ ಯೋಗ್ಯವೆನ್ನಿಸಿರ ಬೇಕು...... ನಂಬಿಯಣ್ಣನ ರಗಳೆ, ಬಸವರಾಜದೇವರ ರಗಳೆ, ಮಹಾದೇವಿಯಕ್ಕನ ರಗಳೆ .... ಇವು ಹರಿಹರನ ಲಲಿತರಗಳೆಯ ಉಚ್ಚತಮ ಶೈಲಿಗೆ ಉದಾಹರಣೆಯಾಗಿವೆ. ಹಾಗೆಯೆ ಆದಯ್ಯನ ರಗಳೆ, ಉದ್ಭಟದೇವನ ರಗಳೆ, ಕುಂಬರ ಗುಂಡಯ್ಯನ ರಗಳೆ,- ಇವು ಮುಂದಾನಿಲಕ್ಕೂ, ಅಕ್ಕನರಗಳೆಯು ಊನೆಯ ಸ್ಥಲ, ಅನಾಯನಾರನ ರಗಳೆ ಇವು ಉತ್ಸಾಹಕ್ಕೂ ಉತ್ತಮ ಉದಾಹರಣೆಯಾಗಿವೆ.' ಇನ್ನಿಷ್ಟು ವಿಶದವಾಗಿ ಈ ಮೆಚ್ಚಿಕೆಯನ್ನು ಮುಂದೆ ವಿವರಿಸಲಾಗಿದೆ. ಅಲ್ಲಲ್ಲಿಯ ಭಾವನಿರ್ಭರತೆಗೂ ಗತಿ ಭೇದಕ್ಕೂ ಇರುವ ಅನುಗುಣ್ಯವನ್ನು ಕೊಂಡಾಡಲಾಗಿದೆ.

ಶರಣಚರಿತಮಾನಸದ ಪೀಠಿಕೆಯಲ್ಲಿ ಹರಿಹರನ ರಗಳೆಯ ವಿಶ್ಲೇಷಣೆ ಹೆಚ್ಚು ವಿಸ್ತಾರವೂ ನಿಕರವೂ ಆಗಿದೆ. ಇದರಲ್ಲಿ ವಿಶೇಷವೆಂದರೆ ದ್ವಿಪದಿಗಳಲ್ಲಿ ಹರಡಿದ ಅವನ ರಗಳೆಯ ವೈವಿಧ್ಯದರ್ಶನ, 'ಹರಿಹರದೇವನ ಅನನ್ಯಸಾಧಾರಣವಾದ ಉತ್ಸಾಹ, ಪ್ರತಿಭೆ, ಪಾಂಡಿತ್ಯ, ಕವಿತಾ ಶಕ್ತಿ, ರಾಗತಾಳಗಳ ಪರಿಜ್ಞಾನದ ಫಲವಾಗಿ ಇಡೀ ಸ್ಥಲದ ದ್ವಿಪದಿಗಳು ಹಲವು ಘಟಕ (ಪದಿಕ)ಗಳಾಗಿ ರೂಪುಗೊಳ್ಳುವುವು. ಈ ಘಟಕ ಅಥವಾ ಪದ್ಯಗುಚ್ಛ, ಎರಡೂ ಎಂಟೊ ಹತ್ತೊ ಹನ್ನೆರಡೊ ಉಪಘಟಕ (ದ್ವಿಪದಿ) ಗಳನ್ನೊಳಕೊಂಡಿರುತ್ತವೆ, ಆಯಾ ಸಂದರ್ಭಸನ್ನಿವೇಶಭಾವಗಳಿಗೆ ತಕ್ಕಂತೆ. ಸಹಜ ಕವಿಯ ಲೇಖನಿಯಿಂದ ಮೂಡಿ ಬರುವ ಆ ಸಹಜ ಘಟಕಗಳು ಆಯಾ ಅರ್ಥ ಭಾವ ಭಾವನೆಗಳಿಗೆ ತಕ್ಕಂತೆ ಸಣ್ಣವೋ ದೊಡ್ಡವೋ ಆಗುವಂತೆ ತಕ್ಕಂಥ ತಾಳಲಯವನ್ನೂ ಪಡೆಯುತ್ತವೆ. ಯಾವುದೋ ಒಂದು ಲಯಗತಿಯಲ್ಲಿ ನಡೆಯುತ್ತಿದ್ದ ಕಥನದಲ್ಲಿ ಹೊಸತೊಂದು ಘಟ್ಟವು ಪ್ರಾರಂಭವಾಯಿತೆಂದರೆ ಹೊಸತಾಳ, ಹೊಸಲಯ, ಹೊಸಸಂಯೋಜನೆ. ಆದರೆ ಕಾವ್ಯರಸಾನುಭವದಲ್ಲಿ ಲೀನರಾಗಿರುವವರಿಗೆ ಒಂದು ಸುರುಳಿ ಮುಗಿದು ಇನ್ನೊಂದು ಸುರುಳಿ ಆರಂಭವಾಯಿತೆನ್ನುವುದೇ ಅರಿವಾಗುವುದಿಲ್ಲ. ಸೂಕ್ತನಿದರ್ಶನಗಳಿಂದ ಈ ವಿಶ್ಲೇಷಣೆಯನ್ನು ಸಂಪಾದಕರು ವಿವರಿಸಿದ್ದಾರೆ. ಈ 'ಪದಿಕ'ಗಳ ಆದಿಅಂತ್ಯವನ್ನು ಗುರುತಿಸುವುದು

ಕಷ್ಟವೇನೂ ಅಲ್ಲವೆಂದೂ ಅಂತ್ಯದಲ್ಲಿ ಎನೆ, ಎನಲು, ಇರೆ, ಇರಲು ಮುಂತಾದ ಮಾತುಗಳಿರುವವೆಂದೂ ಆದಿಯಲ್ಲಿ ಇರೆ, ಇತ್ತಲು, ಬರೆ. ಇಂತು, ಎನೆ, ಎನಲು ಮುಂತಾದ ಶಬ್ದಗಲಿರುವವೆಂದೂ ಯಾವೊಂದು ಪದ್ಯರೂಪ ಸ್ಥೂಲದಲ್ಲಿ ಇಷ್ಟೇ ಘಟಕಗಲಿರುವುವೆಂದು ಖಚಿತವಾಗಿ ಹೇಳಬಹುದೆಂದೂ ಹೇಳಲಾಗಿದೆ. 'ಒಂದೊಂದು ಘಟಕದಲ್ಲಿರುವ ದ್ವಿಪದಿಗಳ ನಾದಮಾಧುರ್ಯ, ರಚನಾ ವೈವಿಧ್ಯ ಭಾವಸೌಂದರ್ಯಗಳನ್ನು ಪರಿಶೀಲಿಸಬಹುದು. ಆದ್ಯಂತ ಪ್ರಾಸಗಳ ಪ್ರಯೋಗ ಛಂದೋನಿಯಮದ ಹದ್ದು ಮೀರದೆಯೆ ಗಣಸಂಯೋಜನೆಯಲ್ಲಿ ವೈವಿಧ್ಯವನ್ನು ತರುವುದು, ಪಾದದ ಕೊನೆಯೊಂದಿಗೆ ಪ್ರಸಕ್ತ ಭಾವ ರಾಗ ಅಥವಾ ಅರ್ಥವನ್ನು ಕೊನೆಗೊಳಿಸದೆ ಅವನ್ನು ಮುಂದಿನ ಪಾದಕ್ಕೂ ಹರಿಸಿ ಅವರ ಚೆಲುವನ್ನು ಇಮ್ಮಡಿಗೊಳಿಸುವುದು, ಸುಗಮವಾದ ಸುದೀರ್ಘ ಸಮಸ್ತ ಸಂಸ್ಕೃತ ಪದಗಳನ್ನೊ ಅಚ್ಚಗನ್ನಡದ ಬಿಡಿಮುತ್ತುಗಳನ್ನೊ ಸಮಯೋಜಿತವಾಗಿ ಪವಣಿಸುವುದು, ಭಾವದ ಕಾವು ಹಂತ ಹಂತವಾಗಿ ಏರುವಂತೆ ಒಂದೇ ಪದವನ್ನು ಪುನಃ ಪುನಃ ಹೇಳುವುದು.

ಇವು ಕವಿಯು ಬಳಸಿರುವ ತಂತ್ರಗಳಲ್ಲಿ ಕೆಲವು. ಇದನ್ನು ಸ್ಪಷ್ಟಗೊಳಿಸುವುದಕ್ಕೆ ಸಾಕಷ್ಟು ನಿದರ್ಶನಗಳನ್ನು ಕೊಡಲಾಗಿದೆ.

ಉದಾ. 'ಲಯವೈವಿಧ್ಯಕ್ಕೆ ---

೭ (೩+೪) ೩ ೧೦ (೫+೫)

ಅಜಿಯನಾತಂ : ಶಿವಂ : ಗರಳಧರನೆಂಬುದಂ

ಅಜಿಯನಾತಂ : ತಿಸುಳ :ದೊಳಗೆ ಹೆಣನಿಪ್ಪುದಂ

ಈ ಧಾಟಿಯಲ್ಲಿ ಕೆಲವು ಪಾದಗಳನ್ನು ಇಟ್ಟು, ಇನ್ನೇನು ಈ ಲಯವು ಹಳಸಿತೆಂಬುದು ಅರಿವಾಗುವ ಮೊದಲೆ,

ಬಲ್ಲನಾನಂದ ಕರುಣಾಸಿಂಧುವೆಂಬುದಂ
ಬಲ್ಲನೀಶಂ ಕೃಪಾವಾರಿನಿಧಿಯೆಂಬುದಂ

ಎಂಬ ಲಯಕ್ಕೆ ತಿರುಗಿಸುವನು. ೭ : ೩:೫:೫ ಮಾತ್ರೆಗಳ ನಡಗೆ ಹಠಾತ್ತನೆ ಇಪ್ಪತ್ತು ಮಾತ್ರೆಗಳ ದಾಪುವಿಗೆ ತಿರುಗುವುದು' ಇದೇ ರೀತಿ ಮಂದಾನಿಲ ರಗಳೆ ಮತ್ತು ಉತ್ಸಾಹರಗಳೆಗಳ ಬಳಕೆಯಲ್ಲಿ ಭಾವೋಚಿತವಾಗಿ ಬಂದಿರುವ 'ಗಣನಿಯಮವಿಪರ್ಯಾಸ'ಅಥವಾ ಗಣಪರಿವೃತ್ತಿಯನ್ನು ಪ್ರಸ್ತಾರದೊಡನೆ ತೋರಿಸಲಾಗಿದೆ. ಲಘು (ಆಧಿಲಘುವಿನ ಒತ್ತಿಗೇ ಗುರು) ವು ಕನ್ನಡ ಛಂದಸ್ಸಿನ ಜಾಯಮಾನಕ್ಕೆ ಸಾಮಾನ್ಯವಾಗಿ ಹೊಂದದಿದ್ದರೂ ಅದನ್ನೂ ಬಳಸಿ ಹರಿಹರನು ಲಯ ಸೌಂದರ್ಯವನ್ನು ಸಾಧಿಸಿರುವನೆಂಬುದಕ್ಕೆ.

'ಪಿನಾಕಿ ಕಳುಪಲ್ ಸುಖದಿಂದಿಲ್ಲಿಗೆ
ನೆಗೆದುದು ವಿಮಾನವಂಬರತಳದೊಳ್'

ಎಂಬ ಬಗೆಯ ಉದಾಹರಣೆಗಳನ್ನು ಕೊಡಲಾಗಿದೆ. ಕೊನೆಗೆ 'ಹರಿಹರನ ಹಸ್ತ ಪರುಷ ಭಾವಪುರುಷ ಪ್ರತಿಭಾ ಪರುಷಗಳ ಪ್ರಭಾವದಿಂದ ರಘಟಾಬಂಧವು ಪರಿಪರಿಯಲ್ಲಿ ಲೇಸುಗೊಂಡಿರುವುದು. ಈತನು ಬಳಸಿರುವ ರಗಳೆಗಳಿಗೆ, ಮೂರು ನಾಲ್ಕು ಐದು ಮಾತ್ರೆಗಳ ಗಣಗಳೆ ಸ್ಥಾಯಿ. ಅವು ತಾಳಗಣನೆಗೆ ಒಡಂಬಟ್ಟು ವಿಧವಿಧದ ರಾಗಲಯವೈವಿಧ್ಯಗಳನ್ನು ಪಡೆಯುವುವು. ಈತನು ರಗಳೆಯ ಮಟ್ಟಿಗೆ ಹೊಸ ರೂಪವನ್ನೂ ನವಶಕ್ತಿಯನ್ನೂ ಅತುಲ ಸಾಮರ್ಥ್ಯವನ್ನೂ ಕೊಟ್ಟು, ಅತ್ಯುಚ್ಚ ಸ್ಥಾನಕ್ಕೇರಿಸಿದನು. ಸಾಹಿತ್ಯಸೌಧದ ಹಿಮ್ಮೊಗ್ಗಲಿನ ಕತ್ತಲು ಕೋಣೆಯಲ್ಲಿ, ಬೇದವ ಸರಕುಗಳಲ್ಲಿ ಅಡಗಿಕೊಂಡಿದ್ದ 'ರಗಳೆ' ದಿವಾಣಖಾನೆಯ ತೋರಗದ್ದುಗೆಗೇರಿತು.'ಎಂದು ಸಮಾರೋಪಗೊಳಿಸಲಾಗಿದೆ.

ಹರಿಹರನ ರಗಳೆಯ ಬಗ್ಗೆ ನಮ್ಮ ವಿಶ್ಲೇಷಣೆ ಮತ್ತು ರಸಾಸ್ವಾದ ಸಾಮಾನ್ಯವಾಗಿ ಇದೇ ರೀತಿಯಾಗಿದ್ದರೂ ರಗಳೆ ಸಾಹಿತ್ಯಸೌಧದ ಹಿಮ್ಮುಗ್ಗಲಿನ ಕತ್ತಲೆ ಕೋಣೆಯಲ್ಲಿ ಅಥವಾ ಬೇದವ

ಸರಕುಗಳಲ್ಲಿ ಅಡಗಿಕೊಂಡಿತ್ತೆಂಬುದನ್ನು ನಾವು ಒಪ್ಪುವಂತಿಲ್ಲ. ಪಂಪ ಮುಂತಾದ ಚಂಪೂ ಕವಿಗಳು ತಮ್ಮ ವರ್ಣಕಗಳಲ್ಲಿ ಅದಕ್ಕೆ ಸಂದರ್ಭೋಚಿತವಾಗಿ ತಕ್ಕ ಸ್ಥಾನವನ್ನು ಕೊಟ್ಟಿದ್ದರಲ್ಲದೆ ಅದರ ಲಯ ಸಾಮರ್ಥ್ಯವನ್ನೂ ಸ್ವಾರಸ್ಯವನ್ನೂ ಪ್ರಕಟಗೊಳಿಸಿದ್ದರು. ಆದರೆ ಅದಕ್ಕೆ ಸ್ವತಂತ್ರ ಸಾಹಿತ್ಯರೂಪದ ಸ್ಥಾನವನ್ನು ಕೊಟ್ಟಿರಲಿಲ್ಲ. ಈ ಅಪೂರ್ವ ಕಾರ್ಯವನ್ನು ಹರಿಹರನು ಅತ್ಯಂತ ಯಶಸ್ವಿಯಾಗಿ ಮಾಡಿದನು. ಈ ಅವನ ಯಶಸ್ಸಿಗೆ ಮುಖ್ಯ ಕಾರಣವೆಂದರೆ ಅವನ ಸಮಸ್ತ ಚೇತನದ, ಸಮಗ್ರ ವ್ಯಕ್ತಿತ್ವದ ಅವಿಷ್ಕಾರಕ್ಕೆ ರಗಳೆ ಅತ್ಯಂತ ಯೋಗ್ಯವಾಹಕವಾಗಿ ಪರಿಣಮಿಸಿತು. ಅವನು ಬರೆದಿರುವುದೆಲ್ಲ ಹೆಚ್ಚಾಗಿ ಭಕ್ತರ ಚರಿತೆಯಾದರೂ ಅದರಲ್ಲಿ ಮಿಡಿಯುತ್ತಿರುವುದೆಲ್ಲ ಅವನ ಭಕ್ತಿಯ ಚರಿತೆ-ಅವನ ಭಾವುಕತೆ, ಉತ್ಸಾಹ, ತನ್ಮಯತೆ, ನಿಷ್ಠೆ ಮತ್ತು ಸರ್ವಾರ್ಪಣಭಾವ ಇವುಗಳ ಪ್ರತೀಕ. ಅವನ ಕಲ್ಪನೆ, ಚಿಂತನೆ, ಭಾವನೆ ಮತ್ತು ಅಭಿವ್ಯಂಜನೆಗಳೆಲ್ಲ ತಡೆಯಿಲ್ಲದೆ ಕಾಳ್ಪುರವಾಗಿ ಹರಿದು ಬರುತ್ತಿರುವ ಭಕ್ತಿರಸಕ್ಕೆ ಪಾತ್ರವಾಗಿ ಮಾತ್ರ ಒದಗಿವೆ. ಅದಮ್ಯವಾದ ಭಾವಪೂರ್ಣವಾದ ಭಕ್ತಿ ಸ್ಥಾಯಿಯೇ ಅವನ ಪ್ರತಿಭೆಗೆ ಪ್ರೇರಕವಾಯಿತು. ಅವನು ಬರೀ ಒಬ್ಬ ಪ್ರಜ್ಞಾ ಪೂರ್ವಕವಾದ ಕಲಾವಿದನಾಗಿದ್ದರೆ ಅವನ ಬರೆವಣಿಗೆಯಲ್ಲಿ ಹೆಚ್ಚಿನ ಸಂಯಮ, ಕಲಾ ಕೌಶಲ್ಯ ಮತ್ತು ಯಥಾರ್ಥತೆ ಬರಬಹುದಾಗಿತು. ಆದರೆ ಅದರಿಂದ ರಗಳೆಯಲ್ಲಿ ಹರಿಹರ ನಿರ್ಮಿತಿಯ ಜೀವಂತಿಕೆ ಮತ್ತು ತುಂಬಿಕೆ ಮಾಯವಾಗುತ್ತಿತ್ತು.

ಲಲಿತ ರಗಳೆಯನ್ನೇ ಹರಿಹರನು ಹೆಚ್ಚಿನ ಪ್ರಮಾಣದಲ್ಲಿ ಬಳಸಿದ್ದಾನೆಂಬುದನ್ನು ಹಿಂದೆ ನೋಡಿದ್ದೇವೆ. ಇದಕ್ಕೆ ಕಾರಣವೇನಾದರೂ ಇರುವುದೇ ಎಂಬ ಪ್ರಶ್ನೆ ತಲೆ ದೋರುತ್ತದೆ. ಲಲಿತರಗಳೆಯಲ್ಲಿರುವ ಐದು ಮಾತ್ರೆಯ ಲಯ ಬಹಳ ಹಿಂದಿನಿಂದಲೂ ಜನಪದ ಸಾಹಿತ್ಯದಲ್ಲಿ ಮತ್ತು ಲಖಿತ ಸಾಹಿತ್ಯದಲ್ಲಿ ರೂಢವಾಗಿತ್ತು. ತ್ರಿಪದಿಯಲ್ಲಿ ಅದು ಪ್ರಮುಖವಾಗಿತ್ತು. ಆಮೇಲೆ ಅದು ಕಥನ ಮತ್ತು ವರ್ಣನಗಳಲ್ಲಿ ಬಂದಿರಬೇಕು. ಜನಪದವಾಣಿ ಮತ್ತು ಲಿಖಿತದಲ್ಲಿಯ ಈ ಪರಂಪರೆ ನಮಗಿಂದು ಅಜ್ಞಾತವಾಗಿದೆ. ಮಾರ್ಗಕವಿಗಳು ಅದರ 'ವರ್ಣಕ' ಭಾಗವನ್ನು ಲಲಿತರಗಳೆಯೆಂದು ಎತ್ತಿ ಪ್ರಚುರಪಡಿಸಿದರು. ಹರಿಹರನು ವರ್ಣಕಯುಕ್ತ ಕಥನಕ್ಕಾಗಿ ಮೊದಲಸಲ ಅದನ್ನು ಬಳಸಿದನು. ಲಲಿತರಗಳೆಯ ಪಾದಗಳಲ್ಲಿ ಅಷ್ಟು ವೇಗವಲ್ಲದ, ಅಷ್ಟು ಮಂದವಲ್ಲದ ಗಂಭೀರಗತಿ ಕಥನಕ್ಕೆ ಅನುಕೂಲವೆಂದು ಅವನಿಗೆ ತೋರಿರಬೇಕು. ಅಲ್ಲದೆ ಹಳಗನ್ನಡದ ನಾಮಕ್ರಿಯಾರೂಪಗಳಿಗೆ ಪಂಚ ಮಾತ್ರಾಲಯವು ಸರಿಹೋಗುವುದೆಂಬ ಸೌಕರ್ಯವು ಅವನಿಗೆ ಕಂಡಿರಬೇಕು. ಇಷ್ಟೇ, ಅವನು ಬಹಳ ಕಟ್ಟುನಿಟ್ಟಾದ ವ್ಯಾಕರಣನಿಷ್ಠನಾಗಿರಲಿಲ್ಲ. ಅವನ ಬರೆವಣಿಗೆಯ ಓಘದಲ್ಲಿ ಹಳಗನ್ನಡದ ರೂಪಗಳು ಅಷ್ಟ ಬಂದರೆ ಅವನ್ನು ಬದಿಗೆ ಸರಿಸಿ ಹೊಸ ರೂಪಗಳನ್ನು ನಿಸ್ಸಂಕೋಚವಾಗಿ ಬಳಸುತ್ತಿದ್ದನು. ಗಂಭೀರಗತಿಯೊಡನೆ ಪಾದಗಳ ಅನಿರ್ಬಂಧ ಪ್ರವಾಹವು ಲಲಿತರಗಳೆಯ ಸೌಲಭ್ಯವನ್ನು ಇನ್ನಿಷ್ಟು ಹೆಚ್ಚಿಸಿತು. ಈ ಪ್ರವಾಹದ ಮೂಲಕ ಶ್ರುತಿಗೆ ಸರಿಹೊಂದಿಸಿದ ಗಾನದಂತೆ ಆದಿ-ಅಂತ್ಯ ಪ್ರಾಸಗಳನ್ನು ಸಾಧಿಸುತ್ತ ಕಥನದ ಮೇಲೆ ಕಣ್ಣಿಟ್ಟು ವರ್ಣನೆಗಳನ್ನು ಹರಿಬಿಟ್ಟು ಭಕ್ತಿಸ್ಥಾಯಿಯನ್ನು ಪೋಷಿಸುತ್ತ ನಿರಂತರವಾದ ನಿರ್ಮಿತಿ ಸಾಗಿರುತ್ತದೆ. ಈ ಮಹಾಪೂರದಲ್ಲಿ ಕಸಕಡ್ಡಿಗಳು ಬಂದಿವೆ, ಅದೇ ಅದೇ ಬಗೆಯ ತೆರೆಗಳು ಬಿದ್ದೇಳುತ್ತಿವೆ. ಆದರೂ ಇದು ನಮ್ಮನ್ನು ಹತ್ತಿರ ಕರೆಯುತ್ತಿದೆ, ತನ್ನ ಸೆಳವಿಲ್ಲಿ ಸೆಳೆಯುತ್ತದೆ, ಮೈಮರೆತು ಮುಳುಗಿ ಏಳುವಂತೆ ಮಾಡುತ್ತದೆ.

ಪುಷ್ಪರಗಳೆ, ಸಂಸಾರ ವ್ಯಾಮೋಹನಿರಸರಗಳೆ ಮುಂತಾದ ಚಿಕ್ಕರಗಳೆಗಳನ್ನು ನೋಡಿದರೆ ಅವನ ಭಕ್ತಿಪೂರ್ಣ ವ್ಯಕ್ತಿತ್ವ ಮತ್ತು ಭಾವನಾಮಯ ಮನೋಧರ್ಮವು ನೇರವಾಗಿ ಪ್ರತೀತವಾಗುತ್ತವೆ. ಅವು ಅವನ ಭಕ್ತಿಪ್ರಗಾಥಗಳಂತೆ ಮಿಡಿಯುತ್ತವೆ. ವಿಶೇಷವಾಗಿ ಪುಷ್ಪರಗಳೆಯಲ್ಲಿ ಲಲಿತರಗಳೆ ಅವನ ಜೀವಾಳವನ್ನು ಎಷ್ಟು ಚೆನ್ನಾಗಿ ಅಭಿವ್ಯಕ್ತಗೊಳಿಸಿದೆ ಎಂಬುದನ್ನು ಅರಿತುಕೊಳ್ಳಬಹುದು. ಅಲ್ಲಿಯ ವಿಷಯ ಅಥವಾ ಆಶಯ ಹಾಗೆ ನೋಡಿದರೆ ತೀರ ಸ್ವಲ್ಪ. ಹೊಸ ಹೊಸ ಹೂಗಳಿಂದ ಹಂಪೆಯ ವಿರೂಪಾಕ್ಷನನ್ನು ಪೂಜಿಸಬೇಕೆಂದು ಅವನು ಹೂದೋಟಕ್ಕೆ ಹೋಗಿ ಹೂಗಳನ್ನು ತಿರಿದು ತಂದು ಪೂಜಿಸಿದ ಬಗೆ ಇದರಲ್ಲಿ ವರ್ಣಿತವಾಗಿದೆ. ಇಷ್ಟು ಸ್ವಲ್ಪವಾದುದು ಹರಿಹರನ ವ್ಯಕ್ತಿತ್ವ ಪುರುಷದಿಂದ ಭೂಮವಾಗಿ ಪರಿಣಮಿಸಿದೆ, ೨೦೦ಕ್ಕೆ ಮೇಲ್ಪಟ್ಟ ಸಾಲು ಗಳಲ್ಲಿ ಹರಡಿಕೊಂಡಿದೆ. ಹರಿಹರನ

ವ್ಯಕ್ತಿತ್ವವಿಲ್ಲದ ಬೇರೊಬ್ಬ ಕವಿಯ ಕೈಯಲ್ಲಿ ಈ ವಿಸ್ತಾರ, ಈ ಅಬ್ಬರಿ, ಈ ಉತ್ಕಟತೆ ಸಾಧ್ಯವಿರಲಿಲ್ಲ. ಹಾಗೇನಾದರೂ ಮಾಡ ಹೋಗಿದ್ದರೆ ಅದು ಕಾಗದದ ಪುಷ್ಪರಗಳೆಯಾಗುವ ಸಂಭವವಿತ್ತು. ಅನಾವಶ್ಯಕ ಪುನರುಕ್ತಿ, ಉದ್ಗಾರ, ಸ್ವರಾನುಕರಣ, ಪರ್ಯಾಯಪದರಾಶಿ ಇವು ಸಾಮಾನ್ಯವಾಗಿ ಕಾವ್ಯಶೈಲಿಯ ದೋಷಗಳು. ಆದರೆ ಈ ದೋಷಗಳು ಹರಿಹರನ ವಿಷಯದಲ್ಲಿ ಬಹುಶಃ ಗುಣಗಳಾಗಿವೆ. ಯಾಕಂದರೆ ಅವು ಒಂದು ನೈಜ, ಪ್ರಾಮಾಣಿಕ ವ್ಯಕ್ತಿತ್ವ ಮೂಲದಿಂದ ಉಕ್ಕಿಬಂದ ಕೋಮಲ ಹಾಗೂ ಉತ್ಕಟ ಭಾವನೆಗಳ ಅಭಿವ್ಯಕ್ತಿ ಸಾಧನಗಳಾಗಿವೆ. ಲಲಿತರಗಳೆ ಅವುಗಳನ್ನು ಸಲೀಲವಾಗಿ ಎತ್ತಿಕೊಂಡು ರಭಸದಿಂದ ನುಗ್ಗುವ ವಾಹಿನಿಯಾಗಿದೆ. ಉದಾಹರಣೆಗೆ, ಕೆಳಗಿನ ಕೆಲವು ಸಾಲುಗಳನ್ನು ಗಮನಿಸಬೇಕು.

ನಿನ್ನ ಗೀತಂಗಳಂ ಹರುಷದಿಂ ಪಾಡುತಂ
ನಿನ್ನ ಪದ್ಯಂಗಳಂ ಪುಳಕಿಸುತ್ತೋದುತಂ
ನಿನ್ನವರ ಕೀರ್ತಿಯಂ ಕೈವಾರಿಸುತೆ ಬರುತೆ
ನಿನ್ನವರ ಮೂರ್ತಿಯಂ ನೆನೆದು ಕರಗುತೆ ಬರುತೆ

ಇಲ್ಲಿ 'ನಿನ್ನ ಮತ್ತು ನಿನ್ನ ಭಕ್ತರನ್ನು ನುತಿಸುತ್ತ' ಎಂಬ ಆಶಯವು ಇಷ್ಟು ಹರಡಿಕೊಂಡು ಇಲ್ಲದ ಪಸರ ಬಂದಿದೆ ಎಂದು ತೋರಬಹುದು. ಆದರೆ ವ್ಯಕ್ತಿತ್ವ ಮೂಲದಲ್ಲಿಯ ನೈಜಭಾವನೆ ಹತ್ತಾರುರೀತಿಯಿಂದ ತನ್ನ ತೋಡಿಕೊಳ್ಳುತ್ತಿದೆ, ಅದಕ್ಕೆ ಎಷ್ಟು ಹೇಳಿದರೂ ಸಾಲದು ಎಂಬ ಸಹಜ ಉತ್ಸಾಹವಿದೆ ಎಂಬುದನ್ನು ನೆನೆದಾಗ ಈ ಪಸರ ಯೋಗ್ಯ ಎನಿಸುತ್ತದೆ. ಕೆಳಗಿನ ಸಾಲುಗಳಲ್ಲಿ ಅದೇ ಭಾವವು ಪರ್ಯಾಯಪದಗಳಿಂದ ಅಭಿವ್ಯಕ್ತಿವಾಗಿರುವುದನ್ನೂ ಹೀಗೇ ಅರ್ಥವಿಸಬೇಕು.

ಪರಿಮಳದ ಸುಗ್ಗಿ ಸೌರಭದ ಸಂದಣಿಯೆನಿಪ
ಸುರುಚಿರಾಮೋದದ ರಸಾಂಭೋಧಿಯೆಂದೆನಿಪ
ಉರವಣಿಪ ಕಂಪಿನ ಪರಮ ಸೀಮೆಯೆಂದೆನಿಪ
ಸುರತರು ಸುಗಂಧದ ತವರ್ಮನೆಯಿದೆಂದೆನಿಪ

ಇಲ್ಲಿ ಭಾವಪುನರುಕ್ತಿಯಲ್ಲದೆ ಅಂತ್ಯಪ್ರಾಸಪದದ ಪುನರುಕ್ತಿಯಾಗಿದೆ. ಅದನ್ನು ಬೇರೆ ಬೇರೆ ಮಾಡಿದರೇನೇ ಪ್ರಾಸಕ್ಕೆ ಸೊಗಸುಬರುತ್ತದೆ. ಆದರೆ ಈ ಸೊಗಸಿಗಾಗಿ ಕವಿ ಹೆಣಗಾಟ ಮಾಡಲು ಹೋಗುವುದಿಲ್ಲ, ಪ್ರಜ್ಞಾಪೂರ್ವಕ ಕಲಾವಿದ ನಾಗುವುದಿಲ್ಲ.

ಕೂಗಾಡುತೊಲೆದಾಡುತಾಹಾ ವಿರೂಪಾಕ್ಷ
ಪೂಗಳಂ ನಡೆನೋಡುತಾಹಾ ವಿರೂಪಾಕ್ಷ

ಇದರಲ್ಲಿಯೂ ಉದ್ಗಾರದ ಪುನರುಕ್ತಿ ಭಾವಮೂಲ್ಯದಿಂದ ಬೆಲೆ ಪಡೆಯುತ್ತದೆ. ಭಕ್ತರು ಯಾರೂ ಮುಟ್ಟದೆ ಮೂಸದೆ ಮೀಸಲಾದ ಹೂಗಳನ್ನು ತಿರಿದು ತಂದು ದೇವರಿಗೆ ಅರ್ಪಿಸಬೇಕೆಂಬುದು ಬರೀ ಒಂದು ಸಂಪ್ರದಾಯವಾಗದೆ ಹರಿಹರನ ನೈಜ ಭಾವನೆಯ ಕಾವಿನಿಂದ ಉದ್ದೀಪ್ತವಾಗಿ ತೋರುತ್ತದೆ.

ಉದಾ:

ಅಳಿಯೆಬಿಗದನಿಲನಲುಗದ ರವಿಕರಂ ಪುಗದ
ಬೆಳೆಬೆಳೆದು ನಳನಳಿಸಿ ಮಘಮಘಿಸುತ ಆಲರ್ದ

ಈ ಪಂಕ್ತಿಗಳಲ್ಲಿ ಹರಿಹರನ ವ್ಯಕ್ತಿತ್ವದ ಮತ್ತು ಅಭಿವ್ಯಕ್ತಿಯ ಮೂಲ್ಯಗಳ ಸಾರ್ಥಕ್ಯವು ಸಾಕಲ್ಯೇನ ಎದ್ದು ಕಾಣುತ್ತದೆ. ಇರವಂತಿ ಹೂ ಹೇಗಿತ್ತೆಂದರೆ ಅಳಿ ಎರಗದ, ಅನಿಲನು ಅಲುಗದ ಮತ್ತು ರವಿಕರವೂ ಪುಗದ ಬಗೆಯಲ್ಲಿ ಬೆಳೆಬೆಳೆದು ನಳನಳಿಸಿ ಮಘಮಘಿಸುತ್ತಿತ್ತಂತೆ. ಈ ಕಲ್ಪಕತೆಗೆ ಕೇವಲ ಪ್ರತಿಭೆ ಕಾರಣವಲ್ಲ. ಅವನ ವ್ಯಕ್ತಿತ್ವ ಮೂಲದಿಂದಲೇ ಇದು ಅಷ್ಟು ಸಹಜರಮ್ಯವಾಗಿ ಹೊಮ್ಮಿದೆ. ಅದರ ಅಭಿವ್ಯಕ್ತಿ ಕೂಡ ಶಬ್ದ, ಲಯ, ಪ್ರಾಸ, ನಾದಗಳ ಚತುರ್ಮುಖದಿಂದ ಅಖಂಡವಾಗಿ ಅಷ್ಟೇ ಸಹಜರಮ್ಯವಾಗಿ ಬಂದಿದೆ. 'ಅಳಿಯೆರಗದನಿಲನಲುಗದ' ಈ ಎಲ್ಲ ಹ್ರಸ್ವ ಅಕ್ಷರಗಳ

ಬೆಸುಗೆಯಲ್ಲಿ ಲಲಿತರಗಳೆಯ ಗಂಭೀರಗತಿ ಭಾವ-ಕಲ್ಪನೆಗಳ ಗಾಂಭೀರ್ಯವನ್ನೂ ಪಾವಿತ್ರ್ಯವನ್ನೂ ಪ್ರಕಟಗೊಳಿಸಿದೆ. ಹಾಗೇ 'ಬೆಳೆಬೆಳೆದು ನಳನಳಸಿ' ಎಂಬ ಪದಗಳ ಜೋಡಣೆ. ಮೊದಲಿನ ಸಾಲಿನಲ್ಲಿ ಲಕಾರವು ಎರಡನೆಯದರಲ್ಲಿ ಳಕಾರವು ಸಹಜ ಅನುಪ್ರಾಸವನ್ನು ಪಡೆದಿರುತ್ತವೆ. ಈ ಎರಡು ಸಾಲುಗಳನ್ನು ಹರಿಹರನು ಎಷ್ಟು ಮೆಚ್ಚಿಕೊಂಡಿದ್ದನೆಂದರೆ ಒಂದು ಸಾಲನ್ನು ಇದ್ದಕಿದ್ದಂತೆ ಇನ್ನೊಂದನ್ನು ತುಸು ಬದಲಿಸಿ 'ಬಸವರಾಜದೇವರ ರಗಳೆ' ಯಲ್ಲಿ ಅವನು ಅಂಥದೇ ಸಂದರ್ಭದಲ್ಲಿ ಉಪಯೋಗಿಸಿದನು.

'ಅಳಿಯೆಱಗದನಿಲನಲುಗದ ರವಿಕರಂ ಪುಗದ
ಸುಳಿಗೊಂಡು ದಳವೇಱಿ ಹಸುರಳಿದು ಬೆಳುಪುಳಿದ' (ಸ್ಥಲ ೩-೧೯, ೨೦)

ಪುಷ್ಪರಗಳೆಗೂ ಬಸವರಾಜದೇವರ ರಗಳೆಗೂ ಇರುವ ಈ ಸಾಮ್ಯವು ಒಂದೇ ಕವಿವ್ಯಕ್ತಿತ್ವವು ಎಲ್ಲ ರಗಳೆಗಳಲ್ಲಿ ಮೂಡಿರುವುದನ್ನು ಸೂಚಿಸುತ್ತದೆ.

ಹೂಗಳೊಡನೆ ಶಿವನ ಮನೆಗೆ ಬಂದ ಮೇಲೂ 'ಅಳಿಗಳೆರಗದ ಗಂಧವಹನಲು ಗದಲರ್ಗಳಂ। ಎಳಸಿತಂದೆಂ ತಂದೆ ದೇವ ಪೊಸ ಪೂಗಳಂ' ಎಂದು ಮತ್ತೆ ಹೇಳಿ ಪ್ರತಿಯೊಂದು ಹೂವನ್ನು ಭಾವಪೂರ್ಣವಾಗಿ ಮುಡಿದು ಮಾಡಿದ ಪೂಜೆಯನ್ನೂ ನೈವೇದ್ಯ-ಆರತಿಗಳನ್ನೂ ಕವಿ ಬಣ್ಣಿಸಿದ್ದಾನೆ, ಅದರಿಂದ ಪಡೆದ ಗದ್ಗದವನ್ನೂ ಆನಂದರಸವನ್ನೂ ನಿರೂಪಿಸಿದ್ದಾನೆ. ಈ ನಿರೂಪಣೆ ಏರೇರುತ್ತ ಹೋಗಿ ತನ್ನ ಸುಳಿಯಲ್ಲಿ ನಮ್ಮನ್ನೂ ಸೆಳೆದು ನವಿರೆಬ್ಬಿಸಿ ಮೈಮರೆವನ್ನು ಉಂಟುಮಾಡುತ್ತದೆ. ಕವಿಯಂತೆ ನಾವೂ ಹೀಗೆ ಬೇಡುವಂತೆ ಮಾಡುತ್ತದೆ.

ವಿಷಯದಿಂ ನೊಂದಪೆಂ ಪಸಿನಿಂದ ಬೆಂದಪೆಂ।
ಕಾಮದೊಳ್ಕಂದಿದೆಂ ತಾಮಸದೊಳೊಂದಿದೆಂ
ಮೋಹದಿಂ ಮಗ್ಗಿದೆಂ ದೇಹದಿಂ ತಗ್ಗಿದೆಂ
ಏವೆಂ ಮಹಾದೇವ ಕಾವುದು ಮಹಾದೇವ
ಆರನೆಂಬೆಂ ದೇವ ಆರುಂಟು ಎಲೆ ದೇವ
ಎನಗೆ ಹೊನ್ನುಂ ನೀನೆ ಎನಗೆ ಚೆನ್ನುಂ ನೀನೆ
ಎನಗೆ ಕುಲವುಂ ನೀನೆ ಎನಗೆ ಬಲವುಂ ನೀನೆ
ಎನಗೆ ಸರ್ವಂ ನೀನೆ ಎನಗೆ ಗರ್ವಂ ನೀನೆ..... ಇತ್ಯಾದಿ

ಇಲ್ಲಿ ಪ್ರತಿಯೊಂದು ಪಾದದಲ್ಲಿ ವಿಶಿಷ್ಟವಾದ ಆಂತರಿಕ ಪ್ರಾಸವಿದೆಯೆಂಬುದನ್ನು ಗಮನಿಸಬೇಕು. ಐದೈದು ಮಾತ್ರೆಗಳ ಗಣದೊಡನೆ ಗಣಪರಿವೃತ್ತಿಯ ಪ್ರಕಾರ ೪+೬ (ಏವೆಂ ಮಹಾದೇವ), ೭+೩(ಆರನೆಂಬೆಂ ದೇವ), ೩+೪+೩(ಎನಗೆ ಹೊನ್ನುಂ ನೀನೆ) ಈ ಬಗೆಯ ಜೋಡಣೆಗಳು ಬರುತ್ತವೆ. ಅದರಿಂದ ರಚನೆಯಲ್ಲಿ ಬೇಸರುತರುವ ಏಕತಾನತೆ ಸಾಮಾನ್ಯವಾಗಿ ಇರುವುದಿಲ್ಲ. ಆದರೆ ಇದು ಹೆಚ್ಚಾಗಿ ಪ್ರಯತ್ನ ಪೂರ್ವಕವಾಗಿರದೆ ಸಹಜ ಸ್ಫೂರ್ತವಾಗಿ ಆಗಿರಬೇಕು.

## 1.3 ಘಟಕದ ಸಾರ

ಈವರೆಗೂ ಪ್ರಾಚೀನ ಛಂದೋಬಂಧವಾದ ರಗಳೆ ಛಂದಸ್ಸಿನ ಸ್ವರೂಪ ಪ್ರಭೇಧ ಮತ್ತು ಅದರ ಸಾರ್ಥಕ್ಯವನ್ನು ಅರಿತಿರಿ. ಇದು ಹೊಸಗನ್ನಡದ ರಚನೆಯಲ್ಲೂ ಅಲ್ಲಲ್ಲಿ ಕೆಲವರು ಪ್ರಯೋಗಿಸಿ ಹೊಸ ಛಂದೋರೂಪಗಳನ್ನೂ ಪಡೆದುಕೊಂಡಿರುವುದನ್ನು ಮನಗಾಣಬಹುದು. ಇಲ್ಲಿ ರಗಳೆಯ ಕಿರುಪರಿಚಯವಷ್ಟೆ ನಮ್ಮ ಪ್ರಯತ್ನವಾಗಿದೆ.

## 1.4 ಸ್ವಪರೀಕ್ಷಾ ಪ್ರಶ್ನೆಗಳು

1. ರಗಳೆ ಎಂದರೇನು ಅದರ ಸ್ವರೂಪವೇನು ?

..............................................................................................................

..............................................................................................................

..............................................................................................................

..............................................................................................................

..............................................................................................................

2. ರಗಳೆ ಪ್ರಬೇಧಗಳಾವುವು?

..............................................................................................................

..............................................................................................................

..............................................................................................................

## 1.5 ಸ್ವಪರೀಕ್ಷಾ ಪ್ರಶ್ನೆಗಳಿಗೆ ಉತ್ತರಗಳು

1. ರಗಳೆ ಎಂದರೆ ಮಾತ್ರಾನಿಯತವಾದ ಛಂದೋಬಂಧ. ಅಂದರೆ ಇದೊಂದು ಸಾಹಿತ್ಯರೂಪ. 'ರಘಟಾ' ಎಂಬ ಸಂಸ್ಕೃತ ಶಬ್ದದ ಅಪಭ್ರಂಶವೆಂಬುದು ಒಂದು ಮಾತು. ಸಂಸ್ಕೃತ, ಪ್ರಾಕೃತ ಛಂದಸ್ಸಿನ ವರ್ಚಸ್ಸಿನ ಫಲವೇ ರಗಳೆ ಎಂಬುದು. ಪಂಪಾನ ಆದಿಪುರಾಣದಲ್ಲಿ ಕಣ್ಣಿಗೆ ಬೀಳುವ ಈ ರಗಳೆ ಮಟ್ಟು, 16 ಮಾತ್ರೆಗಳುಳ್ಳ ಎರಡು ಪಾದಗಳಿಂದ ಕೂಡಿದ ದ್ವಿಪದಿಗಳು ಒಟ್ಟು, 16 ಇರುತ್ತವೆ. ದ್ವಿತೀಯಕ್ಷರ ಪ್ರಾಸವಿಲ್ಲ. ಅಂತ್ಯಪ್ರಾಸ ಒಂದೊಂದು ದ್ವಿಪದಿಗೆ ಬೇರೆಯಾಗಿ ತಪ್ಪದೆ ಇದೆ.

2. ಮಂದಾನಿಲರಗಳೆ, ಲಲಿತರಗಳೆ, ಉತ್ಸಾಹರಗಳೆಂದು ಪ್ರಮುಖವಾಗಿ ರಗಳೆ ಪ್ರಬೇಧಗಳನ್ನು ವಿಂಗಡಿಸಲಾಗಿದೆ.

## 1.6 ಗ್ರಂಥ ಋಣ

ಪ್ರಾಚೀನ ಕನ್ನಡ ಸಾಹಿತ್ಯರೂಪಗಳು : ರಂ. ಶ್ರೀ. ಮುಗಳಿ

## ಸಂಚಿಕೆ - 2
## ಕನ್ನಡ ಸಾಹಿತ್ಯ ಚರಿತ್ರೆ - ನಡುಗನ್ನಡ ಸಾಹಿತ್ಯ

## ಘಟಕ - 2
## ಕವಿ ಹರಿಹರ ಮತ್ತು ಆತನ ಕೃತಿಗಳು

ಪರಿವಿಡಿ :

## 2.0 ಉದ್ದೇಶ

ರಗಳೆಯ ಕವಿ ಎಂದು ಓದಿದಾಗ ತಪ್ಪು ಭಾವಿಸ ಬೇಡಿ. ಏಕೆಂದರೆ ಈಚೀಚೆಗೆ ಜನರು 'ರಗಳೆ' ಎಂಬ ಶಬ್ದಕ್ಕೆ ಸ್ವಲ್ಪ ಕೆಟ್ಟ ಅರ್ಥವನ್ನು ಕೊಟ್ಟಿದ್ದಾರೆ. ಜನರ ಕಲ್ಪನೆಗೂ ರಗಳೆ ಎಂಬ ಶಬ್ದಕ್ಕೂ ಸಂಬಂಧವಿಲ್ಲ. ದೀರ್ಘವಾಗಿ ಸಾಗುವ ಒಂದೇ ಅಳತೆಯ ಸಾಲುಗಳಿಂದಾಗಿ ಕೂಡಿ ಏಕತಾನದ ಭಾವನೆ ಬಂದು ರಗಳೆ ಛಂದಸ್ಸಿಗೆ ಈ ಕಳಂಕ ತಟ್ಟಿರಬಹುದು. ಆದರೆ ದೊಡ್ಡ ಕವಿಯ ಕೈಯಲ್ಲಿ ಯಾವ ಛಂದಸ್ಸು ಕೂಡ ಯಶಸ್ವಿಯಾಗುತ್ತದೆ.

## 2.1 ಪೀಠಿಕೆ

ಚಂಪೂಯುಗದ ನಂತರ ವಚನಗಳ ರಚನೆ ನಡೆಯಿತು. ವಚನ ರಚನೆಯನ್ನು ಹಿಂಬಾಲಿಸಿ ರಗಳೆ ಷಟ್ಪದಿಗಳು ಕಾಣಿಸಿಕೊಂಡುವು. ರಗಳೆಯನ್ನು ಸಂಸ್ಕೃತದ ಮೂಲದಲ್ಲಿ ಹುಡುಕದೆ, ದೇಶೀಯ ಛಂದಸ್ಸು ಎಂದು ಪರಿಣಿಸಲಾಗಿದೆ. ನೂರಾರು ಸಾಲುಗಳ ವರೆಗೆ ಈ ಛಂದಸ್ಸು ಸಾಗುತ್ತದೆ. ಇಷ್ಟೆ ಸಾಲುಗಳಿರಬೇಕು ಎಂಬುದಿಲ್ಲ. ಅಂತ್ಯಪ್ರಾಸವನ್ನು ಉಳಿಸಿಕೊಂಡು ದೀರ್ಘವಾಗಿ ಬೆಳೆದಿರುವ ರಗಳೆಗಳು ಹೆಚ್ಚಾಗಿ ಹರಿಹರನಿಂದ ರಚಿತವಾಗಿವೆ. ರಗಳೆಯಲ್ಲಿ ಉತ್ಸಾಹ, ಮಂದಾನಿಲ, ಲಲಿತ ಎಂಬ ರಗಳೆಗಳು ಪ್ರಸಿದ್ಧವಾಗಿವೆ. ಅವು ಕ್ರಮವಾಗಿ ಮೂರು ಮಾತ್ರೆಯ ನಾಲ್ಕು ಮಾತ್ರೆಯ, ಐದು ಮಾತ್ರೆಯ ಗಣಗಳನ್ನು ಹೊಂದಿದ್ದು ಲಯವೈವಿಧ್ಯವನ್ನು ಬಿಂಬಿಸುತ್ತವೆ.

## 2.2 ಹರಿಹರ

### 2.2.1 ಕಾಲ

. ಹರಿಹರ ಕವಿಯು ತನ್ನ ಕೃತಿಗಳಲ್ಲಿ ತನ್ನ ಕಾಲದ ಬಗ್ಗೆ ಹೇಳಿಕೊಂಡಿಲ್ಲ. ಸಾಮಾನ್ಯವಾಗಿ ಕವಿಗಳು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಸ್ವಂತ ವಿಚಾರಗಳನ್ನು ಹೇಳಿಕೊಂಡಿರುವುದುಂಟು ಮತ್ತು ಒಂದು ಮಾತನ್ನೂ ಹೇಳದೆ ಇರುವವರೂ ಇದ್ದಾರೆ. ಕ್ರಿ.ಶ.೧೧೬೫ ರಿಂದ ಹಿಡಿದು ೧೩೦೦ರವರೆಗೂ ಅವನ ಕಾಲವನ್ನು ನಿರ್ಧರಿಸಿರುವುದು ಕಂಡು ಬರುತ್ತದೆ. ಹರಿಹರನು ತರುಣನಾಗಿದ್ದಾಗ ಉದ್ಯೋಗಕ್ಕಾಗಿ ಹೊಯ್ಸಳ ವೀರ ಬಲ್ಲಾಳನ ಆಶ್ರಯವನ್ನು ಸೇರಿದ್ದನೆಂದು ಹೇಳುತ್ತಾರೆ. ಅದನ್ನು ಆಧಾರವಾಗಿಟ್ಟುಕೊಂಡು ನೋಡಿದರೆ ೧೨೩೫ ರವರೆಗೆ ಆಳಿದ ರಾಜನ ಕಾಲದಲ್ಲಿ ಹರಿಹರನು ಜೀವಿಸಿದ್ದನೆಂದು ಹೇಳಬಹುದು. ಹರಿಹರನು ಏಕಾಂತ ರಾಮಯ್ಯ ಎಂಬ ಶಿವಭಕ್ತನನ್ನು ಕುರಿತು ರಗಳೆಯನ್ನು ಬರೆದಿದ್ದಾನೆ. ಈ ಭಕ್ತನು ಕ್ರಿ.ಶ. ೧೨೦೩ ರಲ್ಲಿ ಬದುಕಿದ್ದನೆಂದು ಅಬ್ಬಲೂರು ಶಾಸನವೊಂದರಿಂದ ತಿಳಿದು ಬರುತ್ತದೆ. ಈ ಭಕ್ತನು ತೀರಿಕೊಂಡ ಬಳಿಕ ಕವಿಯು ತನ್ನ ರಗಳೆಯನ್ನು ಬರೆದಿರುವನೆಂದು ಭಾವಿಸಿದರೆ, ಹರಿಹರ ಕವಿಯು ೧೨೦೩ರ ನಂತರವೂ ಬದುಕಿ ಬಾಳಿರಬೇಕೆಂದು ನಂಬಬಹುದು. ಈ ಕಾರಣಗಳಿಂದಾಗಿ ಹರಿಹರ ಕವಿಯ ಕಾಲವನ್ನು ಸುಮಾರು ಕ್ರಿ.ಶ. ೧೨೨೫ ಎಂದು ಹೇಳಬಹುದು. ಅಥವಾ ೧೩ನೇ ಶತಮಾನದ ಪೂರ್ವಾರ್ಧ ಎಂದು ಹೇಳಿದರೂ ಸರಿಹೊಂದುತ್ತದೆ.

### 2.2.2 ದೇಶ

ಹರಿಹರನು ತನ್ನ ಕಾಲವನ್ನು ಹೇಳಿಕೊಳ್ಳದೆ ಹೋದರೂ ತನ್ನ ಗುರುಗಳ ಹೆಸರನ್ನು ಹೇಳಿದ್ದಾನೆ. ಮಾಯಿದೇವನೆಂಬ ಗುರು ಹಂಪೆಯಲ್ಲಿ ವಾಸಿಸುತ್ತಿದ್ದುದರಿಂದ ಹರಿಹರನೂ ಹಂಪೆಯವನೆಂದು ತಿಳಿಯಬೇಕಾಗಿದೆ. ಹೊಯ್ಸಳ ವೀರ ಬಲ್ಲಾಳನ ಬಳಿ ಗುಮಾಸ್ತನಾಗಿದ್ದ ಹರಿಹರನು ತನ್ನ ಉದ್ಯೋಗವನ್ನು ಬಿಟ್ಟು ಹಂಪೆಗೆ ಬಂದು ವಿರೂಪಾಕ್ಷನ ಭಕ್ತ ಪೂಜಾರಿಯಾಗಿ, ಅವಿವಾಹಿತನಾಗಿ ಜೀವನವನ್ನು ಕಳೆದನೆಂದು ತಿಳಿಯಬಹುದು. ಆತನಿಗೆ ಮದುವೆಯಾಗಿತ್ತೆಂದೂ, ಅನಂತರ ಸಂಸಾರವನ್ನು ಬಿಟ್ಟು, ಸನ್ಯಾಸಿಯಾದನೆಂದೂ

ಹೇಳುತ್ತಾರೆ. ಒಟ್ಟಾರೆ ಒಂದಂತೂ ನಿಜ. ಆತನಿಗೆ ಮದುವೆಯಾಗಿರಲಿ ಅಥವಾ ಆಗದೆ ಇರಲಿ, ಆತನು ರಚಿಸಿರುವ ಕಾವ್ಯಗಳಲ್ಲಿ ಒಳ್ಳೆಯ ಜೀವನಾನುಭವ ನಿರೂಪಣೆ, ಚಿತ್ರಣ ಕಂಡುಬರುತ್ತವೆ ಎಂಬುದಂತೂ ನಿಜವಾದುದು.

### 2.2.3 ಕೃತಿಗಳು

ಹರಿಹರ ಕವಿಯು ರಚಿಸಿರುವ ಕೃತಿಗಳೆಂದರೆ ಮುಡಿಗೆಯ ಅಷ್ಟಕ, ಪಂಪಾಶತಕ, ರಕ್ಷಾಶತಕ, ಗಿರಿಜಾಕಲ್ಯಾಣ ಮಹಾ ಪ್ರಬಂಧ ಮತ್ತು ರಗಳೆಗಳು, ಇಲ್ಲಿ ಎರಡು ವಿಷಯಗಳನ್ನು ನೀವು ತಿಳಿದಿರಬೇಕು. " ಗಿರಿಜಾ ಕಲ್ಯಾಣ ಮಹಾ ಪ್ರಬಂಧಂ" ಚಂಪೂ ಕಾವ್ಯವನ್ನು ಮೊದಲು ರಚಿಸಿದನೆ ಅಥವಾ ಕಡೆಯಲ್ಲಿ ರಚಿಸಿದನೆ ಎಂಬುದು. ಆ ಕಾವ್ಯವು ಚಂಪೂ ಛಂದಸ್ಸಿನಲ್ಲಿದೆ. ಮೊದಲು ಚಂಪೂ ಕಾವ್ಯವನ್ನು ಬರೆದು ಅನಂತರ ಹೊಸಮಾರ್ಗ ಹಿಡಿಯಬೇಕೆಂಬ ನಿರ್ಧಾರದಿಂದ ರಗಳೆಗಳನ್ನು ಬರೆದಿರಬಹುದು. ಮೊದಲು ರಗಳೆಗಳನ್ನು ಬರೆದು, ಯಾರೋ ಮಾಡಿರಬಹುದಾದ ಟೀಕೆಗೆ ಉತ್ತರವಾಗಿ ಚಂಪೂಕಾವ್ಯವನ್ನು ಬರೆದು ಅದೂ ತನಗೆ ಸಾಧ್ಯ ಎಂದು ಸೂಚಿಸಿರಬೇಕು. ಎರಡನೆಯದಾಗಿ ರಗಳೆಗಳ ಸಂಖ್ಯೆ. ಹರಿಹರನು ಎಷ್ಟು ರಗಳೆಗಳನ್ನು ಬರೆದಿದ್ದಾನೆಂಬುದು ತಿಳಿಯದು. ಕೆಲವರು ೧೦೧ ರಗಳೆಗಳನ್ನು ಬರೆದಿರುವನೆಂದೂ, ಇನ್ನು ಕೆಲವರು ೧೨೦ ಎಂದೂ ಹೇಳುತ್ತಾರೆ. ಸುಮಾರು ನೂರು ರಗಳೆಗಳು ದೊರೆತಿವೆ.

## 2.3 ಪಂಪಾಶತಕ

ಶತಕಗಳು (ನೂರು ಪದ್ಯಗಳುಳ್ಳ ಕೃತಿ) ಸಂಸ್ಕೃತ ಸಾಹಿತ್ಯದಲ್ಲಿಯೂ ಇವೆ. ಭಕ್ತಿ, ವೈರಾಗ್ಯ, ಜ್ಞಾನ ಇವುಗಳನ್ನು ಕುರಿತು ಕಾವ್ಯಾತ್ಮಕವಾಗಿ ವಿವರಿಸುವುದು ಶತಕಗಳಲ್ಲಿ ಕಂಡು ಬರುತ್ತದೆ. ಹರಿಹರನು ಭಕ್ತಿ, ವೈರಾಗ್ಯಗಳಿಗೆ ಪ್ರಾಧಾನ್ಯಕೊಟ್ಟಿದ್ದಾನೆ. ತನ್ನ ಮನಸ್ಸಿನ ನೋವನ್ನು ಪದ್ಯರೂಪದಲ್ಲಿ ಹೇಳಿಕೊಂಡಿದ್ದಾನೆ. ಕೆಲವು ಸಲ ಭಕ್ತರು ಇತರರಿಗೆ ಮಾರ್ಗದರ್ಶಕರಾಗಬೇಕು ಎಂಬ ದೃಷ್ಟಿಯಿಂದ ತಮ್ಮನ್ನು ದುರಾತ್ಮರೆಂದು, ಹೀನವ್ಯಕ್ತಿ ಎಂದು ಭಕ್ತಿಯೆಂದರೇನೆಂದು ಗೊತ್ತೇ ಇಲ್ಲವೆಂದು ಇತ್ಯಾದಿಯಾಗಿ ಹೇಳುತ್ತಾ ದೇವರಲ್ಲಿ ಕೃಪೆಯನ್ನು ಬೇಡುತ್ತಾರೆ. ಹರಿಹರನೂ ಕೂಡ ತಾನು ಚಿಕ್ಕಂದಿನಿಂದ ವಿಷಯಾಸಕ್ತನಾಗಿದ್ದು ಶಿವಧ್ಯಾನಕ್ಕೆ ಸಮಯವೇ ಇರಲಿಲ್ಲ ಎಂದು ದುಃಖಿಸುತ್ತಾನೆ. ಈ ದುಃಖವು ಭಕ್ತಿಯ ಆವೇಶವಾಗಿ ಪರಿವರ್ತನೆ ಹೊಂದುತ್ತದೆ. ಆವೇಶದಿಂದ ಹರಿಹರನು ನರ್ತಿಸುತ್ತಾ ಮೈಮರೆಯುತ್ತಾನೆ. ಭಕ್ತಿಯನ್ನು ಸಂಪಾದಿಸುವ ಮಾರ್ಗವನ್ನು ಸೂಚಿಸುತ್ತಾನೆ. ಅರಿಷಡ್ವರ್ಗಗಳ ನಿರ್ಮೂಲನ, ಶರಣಸೇವೆ, ಅಹಂಕಾರನಿರಸನ, ಇವುಗಳಿಂದ ಸಮೀಪವಾಗಬೇಕು. ಹರಿಹರನು

"ಹರಣಂಗಳ್ ಕಳೆಯೇರೆ ಲೋಚನಯುಗಂ ನೀರೇರೆ, ಮೈಯೆಲ್ಲವುಂ
ಕುರುವೇರಲ್ ನಡಿಕಂಪವೇರೆ, ಕರಣಂಗಳ್ ಲೀಲೆಯೇರಲ್ ಮೊಗಂ
ಸಿರಿಯೇರಲ್ ತಲೆಗೇರಿದುತ್ಸವದೆ ನಿನ್ನಂ ಪೂರಿಸುತ್ತಾನುಮಾ
ದರದಿಂದೀಕ್ಷಿಸುತಾಡುತಿರ್ಪುದೆನಗಿನ್ನೆಂದೋ ವಿರೂಪಾಕ್ಷನೇ

ಎಂದು ಆಶಾಭಾವದಿಂದ ಕೂಡಿದ ಕಳವಳದಿಂದ ಹಾಡುತ್ತಾನೆ. 'ರೋಮಾಂಚನದಿಂದ ಕಣ್ಣುಗಳು ಆನಂದ ಬಾಷ್ಪದಿಂದ ತುಂಬಿ ಕೊಂಡು ಮಾತು ತೊದಲಾಗುತ್ತಾ ಮಹಾ ಉತ್ಸಾಹದಿಂದ ನಿನ್ನನ್ನು ನೋಡುತ್ತಾ ಪೂಜಿಸುವ ಕಾಲ ಯಾವಾಗ ಬರುತ್ತದೋ ಎಂದು ಹರಿಹರ ಬೇಡುತ್ತಾನೆ. ಈಗ ಆತನು ವಿಗ್ರಹವನ್ನು ಮಾತ್ರ ನೋಡುತ್ತಿದ್ದಾನೆ ಅಲ್ಲವೇ. ಆ ವಿಗ್ರಹಕ್ಕೆ ಜೀವ ಬಂದರೆ ಹೇಗಿರುತ್ತದೆ ಎಂಬ ಹಂಬಲ ಹರಿಹರನಿಗೆ ಬಹುದಿನದಿಂದಲೂ ಇತ್ತು ಪಂಪಾಶತಕವು ಆತನ ಆಸೆ, ಆಶಯಗಳನ್ನು ಉಜ್ವಲವಾಗಿ ಪ್ರತಿಫಲಿಸಿತ್ತದೆ.

## 2.4 ರಕ್ಷಾಶತಕ

ಇದು ಹರಿಹರನ ಇನ್ನೊಂದು ಶತಕ. ಹೆಚ್ಚೂ ಕಡಿಮೆ ಪಂಪಾಶತಕದ ವಿಷಯವೇ ಇಲ್ಲಿಯೂ ಇದೆ. ಆವೇಶದ ವೇಗ ಕೊಂಚ ಕಡಿಮೆಯಾಗಿದೆ. ವೃದ್ಧರ ಜೀವನಾನುಭವ ಕಾರಣವಾಗುತ್ತದೆ. ತರುಣರ ಆವೇಶ, ಉದ್ರೇಕ ವೃದ್ಧರಿಗೆ ಇರುವುದಿಲ್ಲ. ವೃದ್ಧರ ಜೀವನಾನುಭವ ತರುಣರಿಗಿರುವುದಿಲ್ಲ. ಇವೆರಡೂ ಅಂಶಗಳು ಹೊಂದಿಕೊಂಡರೆ ಜೀವನದಲ್ಲಿ ಯಶಸ್ಸು ಲಭಿಸುತ್ತದೆ. ಹರಿಹರ ಸ್ವಲ್ಪ ವಯಸ್ಸಾದನಂತರ ಈ ಶತಕವನ್ನು ಬರೆದಿರಬೇಕು. ಆದ್ದರಿಂದ ಜೀವನದ ಉದ್ದೇಶವನ್ನು ಇನ್ನೂ ಚೆನ್ನಾಗಿ ವರ್ಣಿಸಿದ್ದಾನೆ. ಸಾಮಾನ್ಯವಾಗಿ ಜ್ಞಾನಿಗಳು ಏನು ಹೇಳುತ್ತಾರೆ ಹೇಳಿ. ಅವರು ಹೇಳುತ್ತಾರೆ- ಜೀವನದ ಗುರಿಯೆಂದರೆ ಆತ್ಮ ಸಾಕ್ಷಾತ್ಕಾರ ಅಥವಾ ದೈವ ಸಾಕ್ಷಾತ್ಕಾರ ಮಾಡಿಕೊಳ್ಳುವುದು ಎಂದು. ಆ ಗುರಿಯನ್ನು ಯಾರು ಬೇಕಾದರೂ ಮುಟ್ಟಬಹುದು. ಆದರೆ ದಾರಿಯಲ್ಲಿ ನೂರಾರು ಅಡ್ಡಿ ಅಡಚಣೆಗಳಿವೆಯಲ್ಲ. ಅರಿಷಡ್ವರ್ಗಗಳು ಸುಮ್ಮನಿರುತ್ತವೆಯೇ, ತಾಪ'ತ್ರಯ' ಕಾಡದಿರುತ್ತವೆಯೆ, ಮಾಯಯು ಸುಮ್ಮನೆ ಬಿಡುತ್ತದೆಯೆ. ಎಷ್ಟೊಂದು ಪರದಾಟ ನೋಡಿ. ಇದಕ್ಕೆ ಏನು ಮಾಡುವುದು ? ಈ ಭವರೋಗಕ್ಕೆ ಔಷಧವೇನು ? ಹರಿಹರ ಹೇಳುತ್ತಾನೆ - ಇದೋ ಔಷಧಗಳಿವೆ, ತೆಗೆದುಕೊಳ್ಳಿ, ಮುಂದುವರಿಯಿರಿ ಎಂದು. ಶಿವಪೂಜೆ, ಸಂಕೀರ್ತನೆ ಪಂಚಾಕ್ಷರೀ ಜಪ ಇತ್ಯಾದಿಗಳಿಂದ ಮಾಯೆಯನ್ನು ಗೆಲ್ಲಬಹುದು ಎನ್ನುತ್ತಾನೆ. ಸಂಪೂರ್ಣ ಶರಣಾಗತವು ದೈವಕೃಪೆಯನ್ನು ತಪ್ಪದೆ ತಂದುಕೊಡುತ್ತದೆಂಬುದು ಹರಿಹರನ ದೃಢವಾದ ಅಭಿಪ್ರಾಯ.

'ನಿಮಗೆನ್ನಂ ಮಾರಿಗೊಟ್ಟೆಂ ಹರಿಹರ ನಿಮಗೆನ್ನನ್ನೆ ತಾನೊತ್ತೆಗೊಟ್ಟೆಂ...'

ನಿಮಗೆ ಮಾರಿಕೊಂಡಿದ್ದೇನೆ. ನಿಮ್ಮಲಿ ನನ್ನನ್ನೇ ಒತ್ತೆಯಿಟ್ಟಿದ್ದೇನೆ ಎನ್ನುವ ಮಾತನ್ನು ನೋಡಿ
'ಬಿಡೆನೀಶಾ ನಿಮ್ಮ ಪಾದಾಬ್ಜವ ನೆಲೆ ಬಿಡೆಂ ಸೀಳ್ದೊಡಂ ಪೋಳ್ದೊಡಂ'

ನನ್ನನ್ನು ಸೀಳಿಹಾಕಿ, ಹೋಳುಮಾಡಿ, ಏನು ಮಾಡಿದರೂ ನಿಮ್ಮ ಪಾದಕಮಲಗಳನ್ನು ಬಿಡುವುದಿಲ್ಲ ಎನ್ನುತ್ತಾನೆ ಕವಿ. ನಿನ್ನ ದಿವ್ಯ ಮೂರ್ತಿಯನ್ನು ನೋಡಬೇಕು. ನಿಮ್ಮೊಡನೆ ನೇರವಾಗಿ ಮಾತನಾಡಬೇಕು ಎಂದು ಕವಿ ಪ್ರಾರ್ಥಿಸುತ್ತಾನೆ. ಇಂತಹ ಇನ್ನೊಬ್ಬ ಪೂಜಾರಿಯನ್ನು ಕಾಣಬೇಕಾದರೆ ನಾವು ಹತ್ತೊಂಬತ್ತನೆಯ ಶತಮಾನದ ಕಾಳಿ ದೇವಿಯ ಪೂಜಾರಿ ರಾಮಕೃಷ್ಣ ಪರಮಹಂಸರ ಅವತಾರದವರೆಗೆ ಕಾಯಬೇಕಾಯಿತು.

ಪಂಪಾಶತಕ, ರಕ್ಷಾಶತಕಗಳಲ್ಲಿ ಕವಿಯ ಆತ್ಮನಿವೇದನೆಯನ್ನು ಸ್ಪಷ್ಟವಾಗಿ ನೋಡಬಹುದು.

## 2.5 ಮುಡಿಗೆಯ ಅಷ್ಟಕ

ಇದು ಒಂದು ಪವಾಡಕ್ಕೆ ಸಂಬಂಧಪಟ್ಟಂತೆ ರಚಿತವಾದ ಕೃತಿ. ಅಷ್ಟಕ ಎಂದರೆ ಎಂಟು ಪದ್ಯಗಳ ಮಾಲಿಕೆ, ಶತಕ ಎಂದರೆ ನೂರು ಪದ್ಯಗಳ ಮಾಲಿಕೆ ಇದ್ದ ಹಾಗೆ ಅಷ್ಟಕವು ಎಂಟು ಪದ್ಯಗಳದು. ಮುಡಿಗೆಯ ಅಷ್ಟಕ'ಕ್ಕೆ ಇನ್ನೊಂದು ಹೆಸರೂ ಇದೆ. ಅದು ಮುಂಡಿಗೆಯ ಅಷ್ಟಕ ಎನ್ನುವುದು. ಮುಂಡಿಗೆ ಎಂದರೆ ಒಗಟು, ಒಡಪು. ಇದನ್ನು ಅರ್ಥಮಾಡಿಕೊಳ್ಳುವುದು ಕಷ್ಟ ಎಂದು ಅರ್ಥ. ಬಹುಶಃ ಇಲ್ಲಿ ನಡೆದ ಪವಾಡವನ್ನು ಅರ್ಥಮಾಡಿಕೊಳ್ಳುವುದು ಕಷ್ಟವೆಂದೂ ತಿಳಿಯಬಹುದು. ಪ್ರತಿ ಪದ್ಯವೂ 'ಕ್ಷ' ಪ್ರಾಸವನ್ನು ಹೊಂದಿದೆ. ವಿಮರ್ಶಕರು ಇದನ್ನು ಗಮನಾರ್ಹ ಕೃತಿ ಎಂದು ಭಾವಿಸಿಲ್ಲ.

## 2.6 ರಗಳೆಗಳು

ಹರಿಹರನ ಸುಮಾರು ನೂರು ರಗಳೆಗಳು ಸಿಕ್ಕಿವೆ. ಆತನು ಹೆಚ್ಚು ಬರೆದಿದ್ದಾನೆಂದು ನಂಬಲಾಗಿದೆ. ರಗಳೆ ಎನ್ನುವುದು ಛಂದಸ್ಸಿನ ಹೆಸರಾದರೂ ಕಾವ್ಯಕ್ಕೂ ಈ ಹೆಸರನ್ನು ಸೇರಿಸಿ ಹೇಳಲಾಗುತ್ತದೆ. ಉದಾಹರಣೆಗೆ ಪುಷ್ಪರಗಳೆ, ಬಸವರಾಜ ದೇವರರಗಳೆ ಇತ್ಯಾದಿ, ಮೊದಲು ಚಂಪೂಕಾವ್ಯಗಳಲ್ಲಿ ಅಲ್ಲಲ್ಲಿ ರಗಳೆ ಕಂಡು ಬರುತ್ತಿತ್ತು. ಅದು ಕೇವಲ ಬದಲಾವಣೆಗಾಗಿ ಮಾತ್ರ ಅದನ್ನು ಸ್ವತಂತ್ರ ಕಾವ್ಯಕ್ಕೆ ಪೂರ್ಣಸ್ವರೂಪದಲ್ಲಿ ಬಳಸಿಕೊಳ್ಳುವ ಪ್ರಯತ್ನವನ್ನು ಮೊದಲು ಮಾಡಿದ ಕವಿ ಎಂದರೆ ಹರಿಹರ. ನೀವು ಆಗಲೇ ಓದಿದ್ದೀರಿ, ರಗಳೆ ಎಂಬುದು ಒಂದು ಕಾವ್ಯದ ಬಗೆ ಎಂದು. ರಗಳೆಯು ದೀರ್ಘವಾಗಿ ಬೆಳೆಯುತ್ತಾ ಹೋಗುತ್ತದೆ. ಅದರ ಎರಡೆರಡು ಸಾಲುಗಳಿಗೆ ಸಮಾನವಾದ ಪ್ರಾಸವಿರುತ್ತದೆ. ಕೆಲವೊಮ್ಮೆ ನಾಲ್ಕು ಸಾಲುಗಳಿಗೂ ಒಂದೇ ತೆರನ ಪ್ರಾಸವಿರುತ್ತದೆ. ಪ್ರತಿಯೊಂದು ಸಾಲಿನಲ್ಲಿಯೂ ಮೂರು ಮಾತ್ರೆಯ ಗಣಗಳು ಬಂದರೆ ಅದು ಉತ್ಸಾಹರಗಳೆ ಎನ್ನಿಸಿಕೊಳ್ಳುತ್ತದೆ.

ಉದಾ: ತುಂಬಿ : ಏಂಡಿ : ನಂತೆ : ಪಾಡಿ

ಜಕ್ಕ : ವಕ್ಕಿ : ಯಂತೆ : ಕೂಡಿ

ಹರಿಹರ ಕವಿಯು ಉತ್ಸಾಹರಗಳೆಯ ಇನ್ನೊಂದು ಬಗೆಯನ್ನು ಹೆಚ್ಚಾಗಿ ಬಳಸಿದ್ದಾನೆ.

ಉದಾ: ಗುರುವೆ : ಕಲ್ಪ : ತರುವೆ : ಹೃದಯ : ದಿರವೆ : ಕರುಣೆ : ಸೆಂದೆ : ನುತ್ತೆ

ಪರವೆ : ಪರಕೆ : ಪರವೆ : ಶಾಂತ : ದಿರವೆ : ಕರುಣೆ : ಸೆಂದೆ : ನುತ್ತೆ

ನಾಲ್ಕು ಮಾತ್ರೆಯ ಗಣಗಳು ಬಂದರೆ ಮಂದಾನಿಲ ರಗಳೆ ಎನ್ನಿಸುತ್ತದೆ.

ಉದಾ : ಆಡುವ : ಗುಂಡ : ಯ್ಯನಹೊಸ : ನೃತ್ಯಂ :

ನೋಡುವ : ಶಿವನಂ : ಮುಟ್ಟಿತು : ಸತ್ಯಂ :

ಐದು ಮಾತ್ರೆಯ ಗಣಗಳು ಇದ್ದರೆ ಲಲಿತ ರಗಳೆಯಾಗುತ್ತದೆ.

ಉದಾ : ನಿಂದಲ್ಲಿ : ನಿಂದಪೆಂ : ನಡೆದಪೆಂ :

ಬಂದಲ್ಲಿ : ಬಂದಪೆಂ : ನುಡಿದಲ್ಲಿ : ನುಡಿದಪೆಂ :

ಹರಿಹರನ ರಗಳೆಗಳು ಈ ಮೂರು ರೀತಿಗಳಲ್ಲಿಯೂ ಇವೆ. ಕಾವ್ಯದ ಕಥಾವಸ್ತುವು ದೊಡ್ಡದಾಗಿದ್ದಾಗ, ಅನುಕೂಲಕ್ಕೆ ತಕ್ಕಂತೆ ಒಂದು ಭಾಗವನ್ನು ಪದ್ಯರೂಪದಲ್ಲಿ ರಗಳೆ ಇನ್ನೊಂದು ಭಾಗವನ್ನು ಗದ್ಯರೂಪದಲ್ಲಿ ಬರೆದಿರುವುದನ್ನು ಕಾಣುತ್ತೇವೆ. ಈ ಭಾಗಗಳನ್ನು ಸ್ಥಲಗಳೆಂದು ಕವಿಯು ಕರೆದಿದ್ದಾನೆ.

ಹರಿಹರನ ರಗಳೆಗಳನ್ನು ಮೂರು ಗುಂಪುಗಳನ್ನಾಗಿ ವಿಭಾಗಿಸಬಹುದು. ವಿಭೂತಿ, ರುದ್ರಾಕ್ಷಿ ಮುಂತಾದುವುಗಳ ಮಹಿಮೆಯನ್ನು ವಿವರಿಸುವ ರಗಳೆಗಳು. ಇವು ಸುಮಾರು ೧೪. ಅನಂತರ ಪುರಾತನ ರಗಳೆಗಳು ಇವು ಸುಮಾರು ೧೪. ಅನಂತರ ಪುರಾತನರ ರಗಳೆಗಳು ಬಸವಣ್ಣ, ಅಲ್ಲಮ ಮುಂತಾದವರನ್ನು ಕುರಿತವು ಸುಮಾರು ೩೦ ಕ್ಕೂ ಹೆಚ್ಚು ಅರ್ಹವಾಗಿವೆ . ಕಾವ್ಯಕಲೆಯ ಒಂದು ದೃಷ್ಟಿಯಿಂದ ವಿಭೂತಿ, ರುದ್ರಾಕ್ಷಿ, ಮುಂತಾದುವುಗಳ ಮೇಲೆ ಬರೆದಿರುವ ರಗಳೆಗಳನ್ನೂ ನೋಡಲೇಬೇಕು.

ಹರಿಹರನಿಗೆ ಪುರಾತನ ಶಿವಭಕ್ತರ ವೃತ್ತಾಂಶವು ತಮಿಳಿನ 'ಪೆರಿಯ ಪುರಾಣಂ' ಕಾವ್ಯದಲ್ಲಿ ದೊರೆತಿರಬಹುದು. ಅಲ್ಲಿರುವ ವಸ್ತುವನ್ನು ತೆಗೆದುಕೊಂಡು ಕೆಲವಂಶಗಳನ್ನು ಬಿಡುವ ಕೆಲವನ್ನು

ಸೇರಿಸುವ ಕಾರ್ಯವನ್ನು ಮಾಡಿ ತನಗೆ ಎಷ್ಟು ಬೇಕೋ ಅಷ್ಟನ್ನು ಇಟ್ಟುಕೊಂಡು ತನ್ನ ಸ್ವಭಾವಕ್ಕೆ ತಕ್ಕಂತೆ ಕಥೆಯನ್ನು ಬೆಳೆಸಿದ್ದಾನೆ. ಅಲ್ಲದೆ ಪೆರಿಯ ಪುರಾಣದಲ್ಲಿರುವ ಎಲ್ಲ ನಾಯಕರು ಹರಿಹರನಲ್ಲಿಲ್ಲ. ಒಟ್ಟಾರೆ ಹರಿಹರನು ತನ್ನ ಕಾವ್ಯದ ವಸ್ತುವನ್ನು ಹಿಂದಿನ ಕಾವ್ಯಗಳಿಂದ ಆರಿಸಿಕೊಂಡು ಸೊಗಸಾದ ರೀತಿಯಲ್ಲಿ ಕಾವ್ಯರಚನೆಯನ್ನು ಮಾಡಿದ್ದಾನೆ. ಹರಿಹರ ಕವಿಯು ರಚಿಸಿರುವ ಮೂರು ವಿಭಾಗಗಳಿಗೆ ಸೇರಿರುವ ರಗಳೆಗಳಲ್ಲಿ ಮೊದಲನೆಯ ವಿಭಾಗದ ಒಂದು ರಗಳೆಯನ್ನು ನೋಡೋಣ.

**ಪುಷ್ಪರಗಳೆ:**

ಇದರಲ್ಲಿ ನಾಯಕ, ನಾಯಕಿ ಮುಂತಾದ ಪಾತ್ರಗಳಿಲ್ಲ. ಅಂದರೆ ಕಥೆ ಎಂಬುದು ಇಲ್ಲಿಲ್ಲ. ಹರಿಹರನು ವಿರೂಪಾಕ್ಷನ ಪೂಜೆಗೆಂದು ದೇವಸ್ಥಾನದ ಉದ್ಯಾನದೊಳಗೆಲ್ಲ ತಿರುಗಾಡುತ್ತ ಹೂವುಗಳನ್ನು 'ತಿರಿ'ಯುವುದು ಇದರ ವಸ್ತು. ಹೂವುಗಳನ್ನು ಕವಿಯು ಕೀಳುವುದಿಲ್ಲ. ಆರಿಸುವುದಿಲ್ಲ, 'ತಿರಿ'ಯುತ್ತಾನೆ. ಏಕೆಂದರೆ ಕವಿಯು ಪ್ರತಿಯೊಂದು ಗಿಡದ ಬಳಿಯೂ ಹೋಗಿ ಹೂವನ್ನು ಕೊಡಿ ಎಂದು ಬೇಡುತ್ತಾನೆ. ಶಿವನನ್ನು ಧ್ಯಾನಿಸುತ್ತಾ ಅವನನ್ನು ಕುರಿತು ಹಾಡುತ್ತಾ ಹೂವಿನ ತೋಟವನ್ನು ಪ್ರವೇಶಿಸುತ್ತಾನೆ.

**'ಹೂಗಳಂ ನಡೆ ನೋಡುತಾಹಾ ವಿರೂಪಾಕ್ಷ**

**ಎನುತೆ ಹಿಗ್ಗುತ್ತೆ ಹೊಂಗುತ್ತೆ ಹೊಮ್ಮುತ್ತುಲಿದು'**

ಸಂಭ್ರಮದಿಂದ ಸುತ್ತಲೂ ನೋಡುತ್ತಾನೆ. ಎಷ್ಟೊಂದು ಬಗೆಯ, ಬಣ್ಣದ ವಾಸನೆಯ ಹೂಗಳು! ಅವುಗಳನ್ನು ನೇರವಾಗಿ ನೋಡಬಾರದು, ವಾಸನೆ ತೆಗೆದುಕೊಳ್ಳಬಾರದು, ಹಾಗೆ ಮಾಡಿದರೆ ಅವುಗಳ ಮೀಸಲು ಅಳಿಯುತ್ತದೆ ಎಂಬ ಭಾವನೆ ಅವನಲ್ಲಿ ತುಂಬಿದೆ.

**'ಏನವ್ವ ಸಂಪಿಗೆಯೆ ಶಿವನ ಸಿರಿಮುಡಿಗಿಂದು**

**ನೀನೀವ ಹೊಸಕುಸುಮವಂ ನೀಡು ನೀಡೆಂದು'**

ಸಂಪಿಗೆಯ ಮರದ ಮುಂದೆ ನಿಂತು ಕೇಳುತ್ತಾನೆ. ನೀನು ಕೊಟ್ಟರೆ ನಾನು ತೆಗೆದುಕೊಳ್ಳುತ್ತೇನೆ ಎಂಬ ಭಾವನೆ ಮಾತಿನಲ್ಲಿ ತುಂಬಿದೆ.

**'ಆಹ ಕೇತಕಿ ನಿನ್ನ ಪರಿಮಳದ ಪರಿ ಬೇರೆ**

**ಉರವಣಿಸಿ ಬೆಳೆದ ಪರಿಮಳಕೆ ಗಿರಿ ಮೂಡಿತೋ'**

ಎಂದು ಕೇದಗೆ ಹೂವನ್ನು ನೋಡಿ ಆಶ್ಚರ್ಯಪಡುತ್ತಾನೆ. ಪರಿಮಳಕ್ಕೆ ಗರಿ ಮೂಡಿ ಹೂವಿನ ರೂಪ ಬಂದಿದೆ ಎಂಬ ಕಲ್ಪನೆಯನ್ನು ನೋಡಿ. ದವನ ಎಂದರೇನೆಂದು ನಿಮಗೆಲ್ಲಾ ಗೊತ್ತಿದೆ. ಅದೂ ಕೂಡ ಕೇದಗೆಯ ಹಾಗೆ ವಿಶಿಷ್ಟವಾದುದು. ಅದನ್ನು ನೋಡಿದರೆ ಒಂದು ಹಸಿರು ಸಸ್ಯವೆಂದು ಮಾತ್ರ ತೋರುತ್ತದೆ. ಆದರೆ ಆ ಹಸಿರು ತನ್ನ ಉಸಿರಿನಲ್ಲಿ ತುಂಬಿಟ್ಟಿರುವ ಸುಗಂಧ ಎಷ್ಟು ನೋಡಿ. ಹರಿಹರ ದವನದ ಗಿಡದ ಮುಂದೆ ನಿಂತು

**'ದವನವೆ ಶಿವನ ಪರಿಮಳದ ಹಬ್ಬವೆ ಬಾರ'**

ಎಂದು ಹೇಳುವ ಮಾತು ಎಷ್ಟು ಸೊಗಸಾದುದು. ಅದು ಪರಿಮಳದ ಹಬ್ಬ ಇದ್ದ ಹಾಗೆ. ನಾವು ಕಣ್ಣಿಗೆ ಹಬ್ಬ ಎನ್ನುತ್ತೇವಲ್ಲ ಹಾಗೆ. ಈ ಹೂವುಗಳನ್ನು ತಿರಿಯುವ ಸಮಯದಲ್ಲಿ ದುಂಬಿಗಳು ಇನ್ನೂ ಎಚ್ಚರಗೊಂಡಿರುವುದಿಲ್ಲ. ಅವುಗಳು ಎದ್ದರೆ ಯಾವ ಹೂವನ್ನು ಬಿಡದೆ ಮೂಸುತ್ತವೆ ಮುಟ್ಟುತ್ತವೆ ಮಡಿ ಕೆಡಿಸುತ್ತವೆ. ಹರಿಹರನಿಗೆ ಈಗ ಉಭಯಸಂಕಟ. ಅವುಗಳಿಗೆ ಹೇಳುತ್ತಾನೆ.

**'ಅಳಿಯಾಸೆ ಬೇಡ ನಿಮಗಿಲ್ಲಿ ಸೋಲ್ಪವರಿಲ್ಲ**

**ಗಳಗಳನೆ ಬಂದಂತೆ ಮರಳಿ ತುಂಬಿಗಳೆಲ್ಲ'**

ಎಲೈದುಂಬಿಗಳೆ ನಿಮಗೆ ಅಳಿಯಾಸೆ ಬೇಡ ಎನ್ನುತ್ತಾನೆ. ಅಳಿಯಾಸೆ ಎಂದರೆ ಕೆಟ್ಟ ಆಸೆ ಎಂದಾಗುತ್ತದೆ. ಜೊತೆಗೆ ಅಳಿ ಎಂದರೆ ದುಂಬಿ ಕೂಡ. ದುಂಬಿಗಳ ಆಸೆ ಅಲಿಯಾಸೆಯಲ್ಲವೆ, ನಿಮಗೆ ಯಾವ ಹೂವೂ ಸೋತು ಆಹ್ವಾನಿಸುವುದಿಲ್ಲ, ದಯವಿಟ್ಟು ಹತ್ತಿರ ಬರಬೇಡಿ, ಇವೆಲ್ಲವೂ ಶಿವನಿಗೆ ಅರ್ಪಣೆ ಮಾಡಿಕೊಳ್ಳಲು ಕಾಯ್ದಿವೆ ಎಂದು ಬುದ್ಧಿ ಹೇಳುತ್ತಾನೆ. ಹೀಗೆ ಹೂವುಗಳನ್ನು ಸಂಗ್ರಹಿಸಿ ಶಿವಪೂಜೆಗೆ ಸಿದ್ಧನಾಗುತ್ತಾನೆ. ಶುದ್ಧನಾಗಿ ಪರಿಶುದ್ಧನಾಗಿ ಪರಿಣಾಮಿಯಾಗಿ ಭಕ್ತಿ ಭಾವದಲ್ಲಿ ಮುಳುಗಿ ಅಹಂನಿರಸನ ಮಾಡಿಕೊಂಡು ಅಲ್ಲಿರುವ ಪುಷ್ಪಗಳ ಮಧ್ಯೆ ತಾನೂ ಒಂದು ಪುಷ್ಪವಾಗಿಬಿಡುತ್ತಾನೆ. ಪುಷ್ಪರಗಳೆಯಲ್ಲಿ ಅಗೋಚರವಾಗಿ ಹರಿಹರನ ಆತ್ಮವೇ ಸಂಚರಿಸಿದಂತೆ ತೋರುತ್ತದೆ.

**ತಿರುನೀಲಕಂಠರ ರಗಳೆ :**

ಹರಿಹರನು ಬರೆದಿರುವ ಪುರಾತನರ ರಗಳೆಗಳಲ್ಲಿ ಒಂದು ರಗಳೆಯನ್ನು ಇಲ್ಲಿ ನೋಡೋಣ. ಪುರಾತನರಲ್ಲಿ ಬಹು ಮಂದಿ ತಮಿಳುನಾಡಿನವರು. ಹರಿಹರನು ಪೆರಿಯ ಪುರಾಣದಿಂದ ತೆಗೆದುಕೊಂಡಿರುವುದರಿಂದ ಸಹಜವಾಗಿಯೇ ಕಥಾನಾಯಕರು ತಮಿಳು ನಾಡಿನವರೇ ಆಗಿದ್ದಾರೆ. 'ಪೊನ್ನಾಂಬಲ' ಎಂಬ ಊರು. ಅಲ್ಲಿ ತಿರುನೀಲಕಂಠನೆಂಬ ಮಹಾ ಶಿವಭಕ್ತ. ಒಂದು ರಾತ್ರಿ ದಾರಿಯಲ್ಲಿ ಬರುವಾಗ ಮಹಡಿ ಮೇಲಿದ್ದ ವೇಶ್ಯೆಯೊಬ್ಬಳು ತಟ್ಟೆ ತೊಳೆದು ನೀರನ್ನು ಅವರ ಮೇಲೆ ಚೆಲ್ಲಿಬಿಡುತ್ತಾಳೆ. 'ತಿರುನೀಲಕಂಠ' ಎಂಬ ಉದ್ಗಾರವನ್ನು ಕೇಳಿ ಬೆಚ್ಚಿಬಿದ್ದು ಓಡಿ ಬಂದು ಕ್ಷಮೆಯನ್ನು ಕೇಳಿ ಸುಗಂಧದ ನೀರಿನಿಂದ ಸ್ನಾನಮಾಡಿಸಿ ರೇಷ್ಮೆ ಬಟ್ಟೆಯನ್ನುಡಿಸಿ ಹೂವಿನ ಮಾಲೆಯನ್ನು ಹಾಕಿ ವೀಳೆಯ ಕೊಟ್ಟು ನಮಸ್ಕರಿಸಿ ಕಳುಹಿಸಿಕೊಂಡುತ್ತಾಳೆ. ಅವರು ಮನೆಗೆ ಬಂದಾಗ ಪತ್ನಿಯು ಸಂದೇಹ ಪಡುತ್ತಾಳೆ. ಆದರೂ ಊಟೋಪಚಾರವನ್ನು ಮುಗಿಸಿ ಪತಿಗೆ ಹಾಸಿಗೆಯನ್ನು ಹಾಸಿ ತಾನು ಮಾತನಾಡದೆ ಮಲಗುತ್ತಾಳೆ. ತಿರುನೀಲಕಂಠರಿಗೆ ಪತ್ನಿಯ ನಡವಳಿಕೆಯು ಅರ್ಥವಾಗದೆ ಕಾರಣ ಕೇಳಲು ಮುಟ್ಟಿ ಎಚ್ಚರಿಸುತ್ತಾರೆ. ಅವಳು ಕೋಪದಿಂದ 'ಮುಟ್ಟಿದರೆ ಶಿವನಾಣೆ' ಎನ್ನುತ್ತಾಳೆ. ಅವರ ದಾಂಪತ್ಯ ಜೀವನ ಅಲ್ಲಿಗೆ ಮುಗಿದು ಹೋಯಿತು. ಶಿವನಾಣೆಯನ್ನು ಮೀರದೆ ಇಬ್ಬರೂ ನೇಮದಿಂದ ಇರುತ್ತಾರೆ. ಒಂದಲ್ಲ ಎರಡಲ್ಲ... ಎಂಬತ್ತು ವರುಷಗಳು ಕಳೆದುಹೋದುವು. ಇಬ್ಬರಿಗೂ ತೊಂಬತ್ತರ ಮುಪ್ಪು ಸಮೀಪಿಸುತ್ತದೆ. ಆದರೆ ಯಾರಿಗೂ ಇದರ ಸುಳಿವಿಲ್ಲ.

ಶಿವನಿಗೆ ತನ್ನ ಮಹಾಭಕ್ತರ ಹಿರಿಮೆಯನ್ನು ಜಗತ್ತಿಗೆ ತೋರಿಸಬೇಕೆಂಬ ಇಚ್ಛೆಯುಂಟಾಯಿತು. ಅದಕ್ಕೆ ಒಂದು ಉಪಾಯವನ್ನು ಹೂಡಿದ. ಭಿಕ್ಷುಕನ ವೇಷ ತಾಳಿ ತನ್ನ ಪಾತ್ರೆಯೊಂದನ್ನು ಇಟ್ಟುಕೊಂಡಿರುವಂತೆ ತಿರುನೀಲಕಂಠರನ್ನು ಕೇಳಿಕೊಂಡ. ಮಾರನೆಯ ದಿವಸವೇ ಬಂದು ಪಾತ್ರೆಯನ್ನು ಕೇಳಿದಾಗ ಪಾತ್ರೆ ಮಾಯವಾಗಿತ್ತು. ದಂಪತಿಗಳನ್ನು ಭಿಕ್ಷುಕ. ನ್ಯಾಯಸಭೆಗೆ ಎಳೆದ, ಎಲ್ಲರಿಗೂ ಆಶ್ಚರ್ಯ, 'ಇವರಿಬ್ಬರೂ ಕೈಕೈಡಿದು ಪ್ರಮಾಣ ಮಾಡಲಿ' ಎಂದ ಭಿಕ್ಷುಕ. ದಂಪತಿಗಳು ಬೆಚ್ಚಿಬಿದ್ದರು. ಸಾಧ್ಯವಿಲ್ಲ ಎಂದರು. ಪುನಃ ಎಲ್ಲರಿಗೂ ಆಶ್ಚರ್ಯ. ಯಾರ ಹಟವೂ ಗೆಲ್ಲಲಿಲ್ಲ. ಕಡೆಗೆ ಭಿಕ್ಷುಕ ಉಪಾಯ ಹೇಳಿಕೊಟ್ಟ, ದಂಪತಿಗಳು ಈ ಕೋಲನ್ನು ಆಕಡೆ ಈ ಕಡೆ ಹಿಡಿದು ನೀರಿನಲ್ಲಿ ಮುಳುಗಿ ಪ್ರತಿಜ್ಞೆ ಮಾಡಲಿ ಎಂದು ಸೂಚಿಸಿದ. 'ಇವರು ಪಾತ್ರೆಯನ್ನು ಇಟ್ಟಿದ್ದು ನಿಜ, ನಾವು ಕದ್ದಿಲ್ಲವೆಂಬುದೂ ನಿಜ' ಎಂದು ಪ್ರತಿಜ್ಞೆ ಮಾಡಿ ಮುಳುಗಿ ಎದ್ದರು. ಎಲ್ಲರಿಗೂ ಮೂರ್ಛೆಹೋಗುವಷ್ಟು ಆಶ್ಚರ್ಯ. ತೊಂಬತ್ತರ ಮುದುಕರು ಹದಿನಾರರ ಹರೆಯದವರಾಗಿಬಿಟ್ಟಿದ್ದರು. ವಿಷಯ ಬಹಿರಂಗವಾಯಿತು. ಶಿವನು ದಂಪತಿಗಳನ್ನು ಕೆಲವರ್ಷಗಳ ಬಳಿಕ ಕೈಲಾಸಕ್ಕೆ ಕರೆದುಕೊಂಡು ಹೋದನು. ಇದು ಈ ರಗಳೆಯ ಕಥಾವಸ್ತು. ಅದನ್ನು ಓದದೆ ಕಾವ್ಯದ ಸ್ವಾರಸ್ಯ ತಿಳಿಯುವುದಿಲ್ಲ. ಈ ಕಥೆಯ ಮುಖ್ಯ ಉದ್ದೇಶ ಶಿವನ ಆಣೆಯ ಮಹತ್ವವನ್ನು ಜಗತ್ತಿಗೆ ತಿಳಿಸುವುದು.

ತಿರುನೀಲಕಂಠ ದಂಪತಿಗಳಿಗೆ ಮುಪ್ಪು ಬಂದಾಗ ಕವಿಯು ಹೀಗೆ ವರ್ಣಿಸುತ್ತಾನೆ.

'ಶಿವಭಕ್ತಿ ಸೋಪಾನದಂತೆ ತೆರೆಗಳು ಮಸಗೆ

ಶಿವನಲ್ಲದಾರು ಇಲ್ಲೆಂಬಂತೆ ತಲೆನಡುಗೆ....'

ಭಿಕ್ಷುಕ ವೇಷದಲ್ಲಿ ಬಂದ ಶಿವನು ತನ್ನ ಪಾತ್ರೆಯನ್ನು ಕೇಳಿದಾಗ ಅದು ಮಾಯವಾಗಿದ್ದುದರಿಂದ ಕೋಪಗೊಂಡು ಆರ್ಭಟಿಸುತ್ತಾನೆ.

'ಗಂಟಲಂ ಕೊಯ್ವರೇ ತೋರಿರೇ ಪೆಟ್ಟಿಗೆಯ

ಉಂಟುಂಟು ಭಕ್ತರೆಂದಿರಿಸಿದೆನಿದೀ ಪರಿಯ

ಏನೊ ಪೆಟ್ಟಿಗೆಯೆ ತಿಂದುದೊ.ನೆಗಳು ನುಂಗಿತೊ

ಮೋನದಿಂದಿರ್ದೊಡಿದರೊಳು ಪಾತ್ರೆ ಇಂಗಿತೊ

ಹೀಗೆ ಕಥೆಯು ನಮ್ಮ ಕುತೂಹಲವನ್ನು ಹೆಚ್ಚಿಸುತ್ತಾ ಮುಂದುವರಿಯುತ್ತದೆ. ದಂಪತಿಗಳ ಧವ.. ಸಂಕಟದ ವರ್ಣನೆ, ಭಿಕ್ಷುಕ ಶಿವನ ಆರ್ಭಟದ ನಟನೆಯ ಚಿತ್ರಣ, ಮುಂತಾದುವನ್ನು ಕವಿಯು ಸುಂದರವಾಗಿ ನಿರೂಪಿಸಿದ್ದಾನೆ. ಕಾವ್ಯ ಕಲೆಯು ಯಶಸ್ಸನ್ನು ಪಡೆದುಕೊಂಡಿದೆ.

## ಪ್ರಭುದೇವರ ರಗಳೆ

ಹರಿಹರನ ನೂತನರ ರಗಳೆಗಳಲ್ಲಿ ಒಂದನ್ನು ಈಗ ನೋಡೋಣ. ನೀವೆಲ್ಲ ಅಲ್ಲಮ ಪ್ರಭುವಿನ ಹೆಸರನ್ನು ಕೇಳಿದ್ದೀರಿ. 12 ನೇ ಶತಮಾನದ ಮಹಾವ್ಯಕ್ತಿಗಳಲ್ಲಿ ಅಲ್ಲಮನೂ ಒಬ್ಬ, ಆತನ ಜೀವನವನ್ನು ಕುರಿತು ಹರಿಹರನು 'ಪ್ರಭುದೇವರ ರಗಳೆ'ಯನ್ನು ಬರೆದಿದ್ದಾನೆ. ಇನ್ನೂ ಕೆಲವರು ಪ್ರಭುವಿನ ಬಗ್ಗೆ ಕಾವ್ಯಗಳನ್ನು ರಚಿಸಿದ್ದಾರೆ. ಆದರೆ ಅವುಗಳಿಗೂ ಹರಿಹರನ ರಗಳೆಗೂ ದೃಷ್ಟಿಕೋನದಲ್ಲಿ ತುಂಬಾ ವ್ಯತ್ಯಾಸವಿದೆ. ಹರಿಹರನು ನಿಜಜೀವನಕ್ಕೆ ಸತ್ಯಕ್ಕೆ ಸಮೀಪವಾಗಿ ಬರೆದಿದ್ದಾನೆ. ಅಲ್ಲಮನು ಯಾರ ಮಗ ಎಂಬುದನ್ನು ಹರಿಹರ ಹೇಳಿಲ್ಲದಿದ್ದರೂ ಯಾವ ಉದ್ಯೋಗದಲ್ಲಿದ್ದನೆಂಬುದನ್ನು ಹೇಳಿದ್ದಾನೆ. ನಾಗವಾಸಾಧಿಪತಿಯು ರಾಜರ ಮನರಂಜನೆಗೆ ಸಂಬಂಧಿಸಿದ ಸಾಂಸ್ಕೃತಿಕ ವಿಷಯಗಳನ್ನು ನೋಡಿಕೊಳ್ಳುವುದು ರೂಢಿ. ಅಂತಹ ಅಧಿಕಾರಿಯ ಮಗನಾದ ಅಲ್ಲಮನು ಸಹಜವಾಗಿಯೇ ಸಂಗೀತ ಜ್ಞಾನವನ್ನು ಬೆಳೆಸಿಕೊಂಡು ಮೃದಂಗ ವಿದ್ವಾಂಸನಾದನು. ಆ ಕಾಲದ ಶ್ರೇಷ್ಠ ಮೃದಂಗವಾದಕನಾಗಿದ್ದನೆಂದು ಪರೋಕ್ಷವಾಗಿ ತಿಳಿದುಬರುತ್ತದೆ.

ಅಲ್ಲಮನು ಎಲ್ಲರ ಹಾಗೆ ಬೆಳೆದು ಕಾಮಲತೆ ಎಂಬ ಕನ್ಯೆಯನ್ನು ವಿವಾಹವಾಗಿ ಕೆಲವು ಕಾಲ ಮಾತ್ರ ಸುಖ ಸಂತೋಷಗಳಲ್ಲಿ ಕಾಲ ಕಳೆದಿರಬಹುದು. ಅತಿ ಶೀಘ್ರವಾಗಿ ಪತ್ನಿಯನ್ನು ಕಳೆದುಕೊಂಡು ಮೋಹಮುಕ್ತನಾಗಿ ವೈರಾಗ್ಯಯುಕ್ತನಾಗಿ ಅನಿಕೇತನನಾಗುತ್ತಾನೆ. ಅನಿಮಿಷಯ್ಯನ ಇಷ್ಟಲಿಂಗ ಅಲ್ಲಮನನ್ನು ಸೇರುತ್ತದೆ. ಅಲ್ಲಿಂದ ಮುಂದೆ.

'ನಡೆದುದೇ ಬಟ್ಟೆಯಾದುದು ಶಿವನ ಮದಕರಿಗೆ

ನುಡಿದುದೇ ವೇದವಾದುದು ಲಿಂಗವಂತಂಗೆ'

ಅಲ್ಲಮನು ಕಲ್ಯಾಣಕ್ಕೆ ಬಂದು ಬಸವಾದಿ ಪ್ರಮಥರನ್ನು ಭೇಟಿಯಾಗುತ್ತಾನೆ. ತನ್ನ ಜೀವನದ ಉದ್ದೇಶವನ್ನು ಈಡೇರಿಸಿಕೊಂಡು ಕದಳೀವನಕ್ಕೆ ತೆರಳುತ್ತಾನೆ.

'ಕದಳೀ ವನಕ್ಕೆ ನಡೆಗೊಂಡನಲ್ಲಮ ದೇವ

ಆಪರದ ಮಹಾ ಮಹಿಮನಿದ್ದನಲ್ಲಮ ದೇವ'

## 2.7 ಗಿರಿಜಾ ಕಲ್ಯಾಣ ಮಹಾ ಪ್ರಬಂಧಂ

ಈ ಕಾವ್ಯದ ವಸ್ತು ಪ್ರಸಿದ್ಧವಾದ ಗಿರಿಜೆಯ ಕಲ್ಯಾಣವೆಂಬುದು ಅದರ ಹೆಸರಿನಲ್ಲಿಯೇ ಇದೆ. ಕಥೆಯು ಲಿಂಗಮಹಾಪುರಾಣದಲ್ಲಿ, ಶಿವಪುರಾಣದಲ್ಲಿ ಇದೆ. ಕಾಳಿದಾಸನ ' ಕುಮಾರ ಸಂಭವ', ಉದ್ಭಟ ದೇವನ 'ಕುಮಾರ ಸಂಭವ' ಕಾವ್ಯಗಳು ಹರಿಹರನಿಗಿಂತ ಮೊದಲೇ ರಚಿತವಾಗಿವೆ. ಆದ್ದರಿಂದ ಹರಿಹರನು ಇಂತಹ ಕಾವ್ಯ ಅಥವಾ ಪುರಾಣದಿಂದ ತೆಗೆದುಕೊಡಿದ್ದಾನೆಂದು ಹೇಳುವುದು ಕಷ್ಟ. ಹಳೆಯ ಕಥೆಯನ್ನು ಹಲವು ಬದಲಾವಣೆಗಳೊಡನೆ ತನ್ನ ಕಾವ್ಯದ ವಸ್ತುವನ್ನಾಗಿಸಿಕೊಂಡಿದ್ದಾನೆ. ಕಾಳಿದಾಸ ಮುಂತಾದವರಿಂದ ಪ್ರಭಾವಿತನೂ ಆಗಿದ್ದಾನೆ.

ಮೊದಲೇ ನೋಡಿದಂತೆ ಗಿರಿಜೆಯ ಕಲ್ಯಾಣವೇ ಈ ಕಾವ್ಯದ ಕಥಾವಸ್ತು. ಗಿರಿಜೆಯೇ ಕಥನಾಯಕಿ. ಗಿರಿಜೆ ಎಂದರೆ ಪಾರ್ವತಿ. ಪಾರ್ವತಿಯ ಜನನ, ಬಾಲ್ಯ, ಯೌವನ, ಮುಂತಾದುವುಗಳ ವರ್ಣನೆ ಇದೆ. ನಾರದನ ಆಗಮನದಿಂದ ಪಾರ್ವತಿಯ ನಿಶ್ಚಯಕ್ಕೆ ಒಂದು ದಿಕ್ಕು ಸಿಕ್ಕಂತಾಯಿತು. ಶಿವನನ್ನು ನೋಡಲು ಶಿವನು ತಪಸ್ಸು ಮಾಡುತ್ತಿದ್ದ ಸ್ಥಳಕ್ಕೆ ಹೋಗುತ್ತಾಳೆ. ಅವಳು ತನ್ನ ದೇಹ ಸೌಂದರ್ಯದಿಂದ ಶಿವನನ್ನು ಆಕರ್ಷಿಸಬಹುದೆಂದು ತಿಳಿದಿದ್ದಳು. ಆದರೆ ಅಲ್ಲಿ ನಡೆದದ್ದೇ ಬೇರೆ. ಗರ್ವದಿಂದ ಗೆಲ್ಲಲು ಬಂದಿದ್ದ ಮನ್ಮಥನು ಸುಟ್ಟು ಬೂದಿಯಾದ ನಂತರ ಪಾರ್ವತಿಗೆ ಹಟವು ಮೂಡುತ್ತದೆ. ಅವಳಿಗೆ ಶಿವನ ತಿರಸ್ಕಾರದ ದೃಷ್ಟಿಯನ್ನು ಎದುರಿಸಲು ಆಗಲಿಲ್ಲ. ದೇಹದ ಸೌಂದರ್ಯವು ದೊಡ್ಡದನ್ನು ಸಾಧಿಸಲಾರದು ಎಂದು ಸ್ಪಷ್ಟವಾಗಿ ತಿಳಿಯುತ್ತಾಳೆ. ತಾನು ಶಿವನು ಇರುವ ಸ್ಥಳಕ್ಕೆ ಹೋಗುವುದಕ್ಕಿಂತ ಶಿವನನ್ನೇ ತಾನಿರುವಲ್ಲಿಗೆ ಬರುವಂತೆ ಮಾಡಿಕೊಳ್ಳುವುದರಲ್ಲಿ ತನ್ನ ಗೆಲುವು ಇದೆ ಎಂದು ದೃಢವಾಗಿ ನಂಬಿ ತಪಸ್ಸಿಗೆ ಕುಳಿತು ಬಿಡುತ್ತಾಳೆ. ಅವಳ ಕಠೋರವಾದ ತಪಸ್ಸನ್ನು ಪರೀಕ್ಷಿಸಲು ಶಿವನೇ ಅವಳಿರುವ ಸ್ಥಳಕ್ಕೆ ವೇಷ ಮರೆಸಿಕೊಂಡು ಬರುತ್ತಾನೆ. ಪಾರ್ವತಿಯನ್ನು ಕೊಂಚ ಛೇಡಿಸಿ ಮಾತನಾಡುತ್ತಾನೆ. ಶಿವನನ್ನು ನಿಂದಿಸುತ್ತಾನೆ (ವೇಷದಲ್ಲಿರುವ ಶಿವ) ಪಾರ್ವತಿಗೆ ಸಿಟ್ಟು ಬಂದು ವಿಭೂತಿಯಿಂದ ವೇಷಧಾರಿಗೆ ಹೊಡೆದಾಗ ನಿಜವಾದ ರೂಪ ಗೋಚರಿಸುತ್ತದೆ. ಮುಂದಿನ ಘಟನೆಯು ಯಾವುದು ಎನ್ನುವುದನ್ನು ನೀವೇ ಊಹಿಸಬಹುದು. ಶಿವ-ಪಾರ್ವತಿಯರ ವಿವಾಹ. ಇಲ್ಲಿಗೆ ಹರಿಹರನ ಕಾವ್ಯವು ಮುಕ್ತಾಯವಾಗುತ್ತದೆ.

### 2.7.1 ಪಾತ್ರ ಪರಿಚಯ

#### ಅ) ಪಾರ್ವತಿ

ಈ ಕಾವ್ಯದಲ್ಲಿ ಪಾರ್ವತಿಯೇ ಪ್ರಧಾನವಾದ ಪಾತ್ರ. ಅವಳ ವಿವಾಹವೇ ಕಥಾವಸ್ತು. ಶಿವನನ್ನು ಸೇರಿಸಿದಂತೆ ಉಳಿದ ಪಾತ್ರಗಳು ಪೋಷಕರ ಪಾತ್ರಗಳು. ಪಾರ್ವತಿಯು ಹುಟ್ಟಿದಂದಿನಿಂದಲೂ ಶಿವನನ್ನೇ ವಿವಾಹವಾಗಬೇಕೆಂದು ಬಯಸಿದ್ದಳು. ನಾರದನೂ ಅದಕ್ಕೆ ಪೋಷಕವಾಗಿ ಮಾತನಾಡುತ್ತಾನೆ. ಶಿವನನ್ನು ಹುಡುಕಿಕೊಂಡು ಹೊರಟ ಪಾರ್ವತಿಯು ಅವನನ್ನು ನೋಡಿ ಅವನ ತಪಸ್ಸಿಗೆ ಭಂಗ ಬಾರದಂತೆ ನೋಡಿಕೊಳ್ಳುತ್ತಿರುತ್ತಾಳೆ. ಶಿವನ ತಪಸ್ಸನು ಭಂಗ ಪಡಿಸಿಲು ಬಂದ ಮನ್ಮಥನು ಎಷ್ಟು ಪ್ರಯತ್ನಿಸಿದರೂ ಸಾಧ್ಯವಾಗುವುದಿಲ್ಲ. ಪಾರ್ವತಿಯು ಅಲ್ಲಿರುವ ಸಂದರ್ಭದಲ್ಲಿ ಅವಳ ಚಿತ್ತಾಭಿಲಾಷೆಯನ್ನೂ ಪೂರೈಸುವ ದೃಷ್ಟಿಯಿಂದ ಬಾಣವನ್ನು ಬಿಟ್ಟಾಗ ಶಿವನ ಸಮಾಧಿ ಸಡಿಲವಾಗುತ್ತದೆ. ಪಾರ್ವತಿಯನ್ನು ನೋಡದೆ ನುಡಿಸದೆ ಅಲ್ಲಿಂದ ಹೊರಟುಹೋದಾಗ ಅವಳಲ್ಲಿ ಭಾವ ಪರಿವರ್ತನೆ ಉಂಟಾಗುತ್ತದೆ. ಇದು ಬಹಳ ಮುಖ್ಯವಾದುದು. ಏಕೆಂದರೆ ಅವಳು ತನ್ನ ದೇಹದ ಸೌಂದರ್ಯದಿಂದ ಶಿವನನ್ನು ಗೆಲ್ಲುತ್ತೇನೆಂದು ತಿಳಿದಿದ್ದುದು ಸುಳ್ಳಾಗುತ್ತದೆ. ನಮ್ಮ ವಿಶ್ವ ಸುಂದರಿಯರು ಕ್ರಮೇಣ ಹೇಳಹೆಸರಿಲ್ಲದಂತೆ ಆಗುವುದನ್ನು ನಾವು ನೋಡುತ್ತಿಲ್ಲವೆ? ಆದರೆ ಝಾನ್ಸಿ ರಾಣಿ, ಕಿತ್ತೂರು ಚನ್ನಮ್ಮ ಮುಂತಾದವರು ಹೇಗೆ ಪ್ರಾತಃ ಸ್ಮರಣೀಯರಾಗಿಯೇ ಉಳಿದಿದ್ದಾರೆ ನೋಡಿ. ಪಾರ್ವತಿಯೂ ತಪಸ್ಸೇ ಸರಿಯಾದ ವಿಧಾನವೆಂದು

ನಿರ್ಧರಿಸುತ್ತಾಳೆ. ಕಠೋರವಾದ ತಪಸ್ಸನ್ನು ಕೈಗೊಂಡು ಶಿವನನ್ನು ಮೆಚ್ಚಿಸಲು ನಿಶ್ಚಯಿಸುತ್ತಾಳೆ. ಅಂದರೆ ಯಾವುದನ್ನು ದೇಹದ ಸೌಂದರ್ಯದಿಂದ ಗೆಲ್ಲಲು ಸಾಧ್ಯವಾಗಲಿಲ್ಲವೋ ಅದನ್ನು ಆತ್ಮದ ಸೌಂದರ್ಯದಿಂದ ಗೆಲ್ಲುತ್ತಾಳೆ. ಅವಳ ತಪಸ್ಸನ್ನು ಶಿವನು ಮೆಚ್ಚುತ್ತಾನೆ. ವಿವಾಹವಾಗಲು ಸಮಾನವಾದ ಸತ್ವಶಾಲಿಗಳಾಗಬೇಕು ಎನ್ನುವುದನ್ನು ಹರಿಹರನು ಈ ಪಾತ್ರದ ಮೂಲಕ ಸ್ಪಷ್ಟಪಡಿಸಿದ್ದಾನೆ.

**ಆ) ಶಿವ**

ದೇವರು ಇಡೀ ವಿಶ್ವದ ಒಡೆಯ, ಅವನು ವಿಶ್ವವನ್ನು ರಕ್ಷಿಸಿಕೊಂಡು ಹೋಗಬೇಕು. ಅದಕ್ಕ ಆತ್ಮಾನುಸಂಧಾನ ಮಾಡಬೇಕು. ಭೋಗದಲ್ಲಿ ಮಗ್ನನಾಗುವ ಮನೆಯ ಯಜಮಾನ, ಕುಟುಂಬವನ್ನು ಸರಿಯಾಗಿ ನೋಡಿಕೊಳ್ಳಲಾರ. ನಮ್ಮ ಇಂದಿನ ಎಲ್ಲ ಬಗೆಯ ನರಳಾಟಕ್ಕೂ ಮನೆಯ ಯಜಮಾನ, ದೇಶದ ಯಜಮಾನ ಭೋಗಮಗ್ನರಾಗಿರುವುದೇ ಕಾರಣ. ಹರಿಹರ ಕವಿಯು ಶಿವನನ್ನು ಯೋಗ ಮುಖದಲ್ಲಿ ಇರಿಸಿರುವುದು ಬಹಳ ಅರ್ಥಪೂರ್ಣವಾದುದು. ಅದನ್ನು ತಿಳಿಯದ ಭೋಗಿಗಳಾದ ದೇವತೆಗಳು ಮನ್ಮಥನನ್ನು ಮುಂದಿಟ್ಟುಕೊಂಡು ಶಿವನ ಯೋಗವನ್ನುಕೆಡಿಸಲು ಯತ್ನಿಸುತ್ತಾರೆ. ಬಡಪಾಯಿ ಮನ್ಮಥ ಬೂದಿಯಾದಾಗ ದೇವತೆಗಳು ಪಲಾಯನ ಮಾಡುತ್ತಾರೆ. ಶಿವನು ಪಾರ್ವತಿಯನ್ನು ನೋಡಿ ಇದಾವುದೋ ಜೀವಿಯೆಂಬತೆ ನಿಕೃಷ್ಟವಾಗಿ ಭಾವಿಸಿ ಎಂದು ಹೊರಟು ಬಿಡುತ್ತಾನೆ. ಪಾರ್ವತಿ ತಾನು ಎಂತಹ ಸುಂದರಿ ಎಂದು ಕೊಂಡಿದ್ದಳೋ ಅದೆಲ್ಲ ಮನಸ್ಸಿನಿಂದ ಮಾಯವಾಗುತ್ತದೆ. ಶಿವನಿಗೆ ಪಾರ್ವತಿಯ ತಪಸ್ಸು ಸಾಧಾರಣವಾದುದಲ್ಲ ಎಂದು ತಿಳಿದಾಗ ತಾನೇ ಅಲ್ಲಿಗೆ ಬರುತ್ತಾನೆ. ಅವಳನ್ನು ಪರೀಕ್ಷಿಸುತ್ತಾನೆ. ಅಕ್ಕಸಾಲಿಗನು ಚಿನ್ನವನ್ನು ಒರೆಗೆ ಹಚ್ಚುವಂತೆ ಬಣ್ಣವನ್ನು ಬಯಲು ಮಾಡುತ್ತಾನೆ. ತಾನೇ ಬಣ್ಣಗೆಡಬೇಕಾಗುತ್ತದೆ. ಶಿವನ ಪಾತ್ರವೂ ಕೂಡ ಸಮುಚಿತವಾಗಿ ಚಿತ್ರಿತವಾಗಿದೆ.

**2.7.2 ಸನ್ನಿವೇಶ ನಿರ್ಮಾಣ**

**ಅ) ಕಾಮದಹನದ ದೃಶ್ಯ**

ಶಿವನು ಯೋಗಮುಖದಲ್ಲಿ ಕುಳಿತಿರುವುದನ್ನು ನೋಡಿದ ದೇವತೆಗಳು ಅವನನ್ನು ಹೇಗಾದರೂ ಮಾಡಿ ಸಂಸಾರಿಯನ್ನಾಗಿಸಬೇಕೆಂದು ತೀರ್ಮಾನಿಸುತ್ತಾರೆ. ಏಕೆಂದರೆ ಅವರಿಗೆ ಒದಗಿರುವ ಕಷ್ಟವು ಪರಿಹಾರವಾಗಬೇಕಾದರೆ ಶಿವನು ವಿವಾಹವಾಗಿ ಮಗನನ್ನು ಪಡೆಯಬೇಕು. ಆ ಮಗನೇ ಭಯಂಕರ ರಾಕ್ಷಸ ತಾರಕಾಸುರನನ್ನು ಕೊಲ್ಲಲ್ಲು ಶಕ್ತನಾದವನು. ಮನ್ಮಥನನ್ನು ಎಲ್ಲರೂ ಪ್ರೋತ್ಸಾಹಿಸಿ ಕರೆದುಕೊಂಡು ಬರುತ್ತಾರೆ. ಮನ್ಮಥನು ಬಾಣಗಳನ್ನು ಬಿಡಲು ಪ್ರಾರಂಭಿಸುತ್ತಾನೆ. ಆದರೆ ಅವನ ಹೂಬಾಣಗಳು ವಜ್ರಸಮ ವ್ಯಕ್ತಿತ್ವನ್ನು ಭೇದಿಸಲು ಸಾಧ್ಯವೆ. ಪಾರ್ವತಿಯ ಸೌಂದರ್ಯವನ್ನೂ ತನ್ನ ಬಾಣಕ್ಕೆ ಆವಾಹಿಸಿ ಪ್ರಯತ್ನಿಸಿದಾಗ ಶಿವನು ಕಣ್ತೆರೆದು ಪಾರ್ವತಿಯನ್ನು ನೋಡಿದರೂ ಅವನಿಗೆ ಅನುಮಾನ ಬಂದದ್ದು ಕಾಮನ ಮೇಲೆ. ಶಿವನು ಕೋಪದಿಂದ ಅವನ ಕಡೆ ನೋಡಿದಾಗ ಬೆಂಕಿಯು ಹೇಗೆ ಹುಟ್ಟಿ, ಬೆಳೆದು ವ್ಯಾಪಿಸಿ ಮನ್ಮಥನನ್ನು ಸುಟ್ಟುಹಾಕಿತು ಎಂಬುದನ್ನು ದೀರ್ಘವಾಗಿ, ಸಚಿತ್ರವಾಗಿ ವರ್ಣಿಸಿದ್ದಾನೆ ಕವಿ. ಈ ಸನ್ನಿವೇಶವನ್ನು ಕವಿಯು ಶಕ್ತಿಯುತವಾಗಿ ನಿರ್ಮಿಸಿ ಕೊಟ್ಟಿದ್ದಾನೆ.

**ಆ) ಪಾರ್ವತಿಯ ತಪಸ್ಸು**

ಕಾಮದಹನ ಆದ ಮೇಲೆ ಶಿವನು ಏಕಾಗ್ರಚಿತ್ತನಾಗಿ ತನ್ನ ಸುತ್ತಮುತ್ತ ಯಾರಿದ್ದಾರೆ ಎಂಬುದನ್ನು ನೋಡದೆ ಅಲ್ಲಿಂದ ವೇಗವಾಗಿ ಹೊರಟುಹೋಗುತ್ತಾನೆ. ಅಭಿಮಾನಿಯಾದ ಪಾರ್ವತಿಯು ಸಹಜವಾಗಿ ಕೋಪಗೊಳ್ಳುತ್ತಾಳೆ. ಶಿವನ ತಪ್ಪು ಏನೂ ಇಲ್ಲವಾದರೂ ಪಾರ್ವತಿಯು ತಾನು ಅಷ್ಟುದಿನದಿಂದ ಅವನನ್ನು ನೋಡಿಕೊಳ್ಳುತ್ತಿದ್ದೆನೆಂಬ ಭಾವನೆಯಿಂದ ತುಂಬಿಹೋಗಿದ್ದಳು. ಆದೂ ಕೂಡ ಶಿವನಿಗೆ ತಿಳಿಯದು. ಶಿವನಿಗೆ ಸರಿಯಾಗಿ ಮಾಡುತ್ತೇನೆಂದು ತಾನೂ ಸಹ ಕಠೋರ ತಪಸ್ಸು ಮಾಡತೊಡಗುತ್ತಾಳೆ. ಶಿವನು ಪಾರ್ವತಿಯು ಇದ್ದಲ್ಲಿಗೆ ಬರುತ್ತಾನೆ. ವಟುವೇಷದಲ್ಲಿದ್ದ ಶಿವನನ್ನು ಪಾರ್ವತಿಯ ಸಖಿಯರು

ಸತ್ಕರಿಸುತ್ತಾರೆ. ಈ ಚಿಕ್ಕವಯಸ್ಸಿನಲ್ಲಿ ತಪಸ್ಸೇಕೆ ಎಂದು ಕೇಳಿದಾಗ ಪಾರ್ವತಿಯು ಕಣ್ತೆರೆದು ನೋಡುತ್ತಾಳೆ. ಅವನು ಆಕೆಯ ಸೌಂದರ್ಯವನ್ನು ಪ್ರಧಾನವಾಗಿ ಸೂಚಿಸುತ್ತಾ ತಪಸ್ಸು ಏಕೆಂದು ಕೇಳುತ್ತಾನೆ. ಶಿವನಿಗೆ ಕರುಣೆ ಬರಲಿ ಎಂದು ತಪಸ್ಸು ಮಾಡುತ್ತಿದ್ದೇನೆ ಎನ್ನುತ್ತಾಳೆ. ಅವನು ಶಿವನನ್ನು ಒಂದು ರೀತಿಯ ದೂಷಿಸುವಂತೆ ಮಾತನಾಡಿದಾಗ ಸೈರಿಸದ ಪಾರ್ವತಿಯು ವಿಭೂತಿಯಿಂದ ಹೊಡೆಯುತ್ತಾಳೆ ವಟುವೇಷ ಹೋಗಿ ನಿಜವೇಷ ನಿಲ್ಲುತ್ತದೆ ಆಗ ಕವಿಯು 'ಶಿವನಾದೊಡೇಂ ಪುಸಿದಿಟಕ್ಕೆ ನಿಲ್ಬುದೆ ಜಗದೊಳ್' ಎಂದು ನಿತ್ಯಸತ್ಯವಾಕ್ಯವನ್ನು ಹೇಳುತ್ತಾನೆ. ಇಡೀ ಭಾಗವು ಬಹಳ ಸ್ವಾರಸ್ಯಪೂರ್ಣವಾದ ವಾದವಿವಾದಗಳಿಂದ ಕೂಡಿದೆ.

## 2.8 ಘಟಕದ ಸಾರ

ಇದು ೨ನೇ ಸಂಚಿಕೆ ೨ನೇ ಘಟಕ : ಎಂ.ಪಿ.ಪಿ. ಸಾಮಗ್ರಿ ಈವರೆಗೂ ಹದಿಮೂರನೇ ಶತಮಾನದ ಮಹಾಕವಿಯಾದ ಹರಿಹರನ ಕಾವ್ಯ ಹಾಗೂ ರಗಳೆಗಳ ಕೃತಿ ಪರಿಚಯವನ್ನು ಸಂಕ್ಷಿಪ್ತವಾಗಿ ಇಲ್ಲಿ ಅವಲೋಕಿಸಲಾಗಿದೆ. ಇದರಿಂದ ಕಾಲಘಟ್ಟದಲ್ಲಿ ಹೇಗೆ ಕವಿಗಳು ಹುಟ್ಟಿಬಂದು ಕಾವ್ಯಮಾರ್ಗವನ್ನು ಸೃಜಿಸಿ ಹೊಸ ಅಯಾಮ ನಿರ್ಮಿಸಿ ಕನ್ನಡ ಸಾಹಿತ್ಯ ಚರಿತ್ರೆಯ ವೈವಿಧ್ಯತೆಗೆ ಕಾರಣರಾಗಿದ್ದಾರೆಂದು ಮನವರಿಕೆಯಾಗುವುದು. ಭಕ್ತಿಯು ಜೀವನೋತ್ಸಾಹದ ಅದಮ್ಯ ಚೈತನ್ಯಧಾತವಾಗಿತ್ತೆಂಬುದು ಇದರಿಂದ ಮನಗಾಣಬಹುದು. ಹರಿಹರ ನೂರಾರು ರಗಳೆಗಳನ್ನು ಬರೆದಿದ್ದಾನೆ. ಅರ್ಥಾಥ್ ನೂರಾರು ಶಿವಭಕ್ತರ ವೈವಿಧ್ಯಮಯ ಜೀವನಮಾರ್ಗವನ್ನು ಕಾರ್ಯಕ್ಷೇತ್ರಕ್ಕೆ ಪರಿಚಯಿಸಿ ಸ್ತುತಿಕೆಯನ್ನು ಮೆರೆದಿದ್ದಾನೆ ಎಂಬುದು ಈ ಘಟಕದ ವಿವರಣೆಗಳು ಸ್ಪಷ್ಟಗೊಳಿಸುತ್ತವೆ.

## 2.9 ಸ್ವಪರೀಕ್ಷಾ ಪ್ರಶ್ನೆಗಳು

1. ಹರಿಹರನ ಕಾಲ ಯಾವುದು ? ಅವನ ಕೃತಿಗಳು ಯಾವುವು?

..........................................................................................

..........................................................................................

..........................................................................................

..........................................................................................

2. ಶತಕಗಳೆಂದರೇನು? ಅವು ಏನನ್ನು ಒಳಗೊಂಡಿರುತ್ತವೆ.

..........................................................................................

..........................................................................................

..........................................................................................

3. ಗಿರಿಜಾ ಕಲ್ಯಾಣದ ಕಥಾವಸ್ತುವೇನು ? ಇದರ ವಿಶೇಷವೇನು?

..........................................................................................

..........................................................................................

..........................................................................................

..........................................................................................

## 2.10 ಸ್ವಪರೀಕ್ಷಾ ಪ್ರಶ್ನೆಗಳಿಗೆ ಉತ್ತರಗಳು

1. ಹರಿಹರನ ಕಾಲ ೧೨೩೫ ಅಂದರೆ 13ನೇ ಶತಮಾನ. ಹರಿಹರ ರಚಿಸಿರುವ ಕೃತಿಗಳ ಹೀಗಿವೆ: ಪಂಪಾಶತಕ, ರಕ್ಷಾಶತಕ, ಮುಡಿಗೆಯ ಅಷ್ಟಕ, ಗಿರಿಜಾಕಲ್ಯಾಣ ಮಹಾಪ್ರಬಂಧಂ (ನೂರಾರು) ಶಿವಭಕ್ತರ ಜೀವನ ಕಥೆಯನ್ನೊಳಗೊಂಡ ಕನ್ನಡ ವಿಶಿಷ್ಟವಾದ ಮಟ್ಟು 'ರಗಳೆ'ಗಳು.

2. ಶತಕಗಳೆಂದರೆ ನೂರು ಪದ್ಯಗಳುಳ್ಳ ಕೃತಿ. ಈ ಶತಕಗಳು ವೈರಾಗ್ಯ, ಭಕ್ತಿಜ್ಞಾನ, ನೀತಿ ಸಾರಗಳನ್ನು ಸಾರುವ ಕಥಾವಸ್ತುವನ್ನೊಳಗೊಂಡಿರುತ್ತವೆ.

3. ಹೆಸರೇ ಹೇಳುವಂತೆ ಗಿರಿಜೇ (ಪಾರ್ವತಿ) ಮತ್ತು ಶಿವರಿಬ್ಬರ ವಿವಾಹ ವೃತ್ತಾಂತವನ್ನು ನಿರೂಪಿಸುವುದೇ ಕಾವ್ಯದ ಕಥಾವಸ್ತು. ಹರಿಹರ ರಗಳೆಗಳನ್ನು ಹೆಚ್ಚಾಗಿ ಬರೆದು ರಗಳೆ ಕವಿ ಎಂದು ಹೆಸರು ಪಡೆದ. ಇದಕ್ಕೆ ಅಪವಾದವಾಗಿ ತಾನು ಚಂಪೂಕವಿ ಎಂಬುದನ್ನು ಸಾಭೀತು ಪಡಿಸಲು ಈ ಕೃತಿಯನ್ನು ಚಂಪೂ ಶೈಲಿಯಲ್ಲಿ ಅಂದರೆ ಗದ್ಯಪದ್ಯಗಳ ಮಿಶ್ರಣದಿಂದ ಕೃತಿ ರಚಿಸಿರುವುದೇ ವಿಶೇಷವಾಗಿದೆ.

# ಸಂಚಿಕೆ - 2
# ಕನ್ನಡ ಸಾಹಿತ್ಯ ಚರಿತ್ರೆ - ನಡುಗನ್ನಡ ಸಾಹಿತ್ಯ

## ಘಟಕ - 3
## ಷಟ್ಪದಿ ಸಾಹಿತ್ಯ- ಪರಿಚಯ, ರಾಘವಾಂಕ : ಕವಿ, ಕೃತಿಗಳು

**ಪರಿವಿಡಿ :**

3.0. ಉದ್ದೇಶ

3.1 ಪೀಠಿಕೆ

3.2. ಷಟ್ಪದಿಯ ಪರಿಚಯ

3.3 ಷಟ್ಪದಿಯ ಉಗಮ ಮತ್ತು ವಿಕಾಸ

3.4 ಷಟ್ಪದಿಯಲ್ಲಿ ರಚಿತವಾದ ಕಾವ್ಯಗಳು

3.5 ರಾಘವಾಂಕನ ಕಾಲ ದೇಶ ವಿಚಾರ

- 3.5.1 ದೇಶ
- 3.5.2 ಕೃತಿಗಳು
- 3.5.3 ಕೃತಿ ಪರಿಚಯ
- 3.5.4 ಕಥಾವಸ್ತು
- 3.5.5 ಪಾತ್ರ ಪರಿಚಯ
- 3.5.6 ವಿಶಿಷ್ಟ ಸಂದರ್ಭಗಳು

3.6 ಕೃತಿ - ೨ ಸಿದ್ಧಾರಾಮ ಚಾರಿತ್ರ

- 3.6.1 ಆಕರ
- 3.6.2 ಕಥಾವಸ್ತು

3.7 ಕೃತಿ -೩ ಸೋಮನಾಥ ಚಾರಿತ್ರ

- 3.7.1 ಆಕರ
- 3.7.2 ಕಥಾವಸ್ತು

3.8 ಕೃತಿ -೪ ವೀರೇಶ ಚರಿತೆ

- 3.8.1 ಆಕರ
- 3.8.2 ಕಥಾವಸ್ತು

3.9 ಭಾಷೆ, ಶೈಲಿ, ಕೃತಿ ಮಹತ್ವ

3.10 ಸ್ವಪರೀಕ್ಷಾ ಪ್ರಶ್ನೆಗಳು

3.11 ಅಭ್ಯಾಸ ಪ್ರಶ್ನೆಗಳು

3.12 ಸಾರಾಂಶ

## 3.0 ಉದ್ದೇಶ

- ಕನ್ನಡ ಕವಿಗಳು ಸ್ವತಂತ್ರವಾಗಿ ಛಂದಸ್ಸನ್ನು ಪ್ರಯೋಗಿಸಿರುವುದು
- ದ್ರಾವಿಡ ಭಾಷೆಯ ಜಾಯಮಾನಕ್ಕೆ ಒಗ್ಗುವ ಛಂದಸ್ಸನ್ನು ಆಯ್ಕೆಮಾಡಿರುವುದು
- ದೇಸಿಮಟ್ಟು ಮತ್ತು ದೇಸಿ ವಸ್ತುಗಳ ಬಳಕೆ
- ವಸ್ತು, ಭಾಷೆ, ಶೈಲಿಯಲ್ಲಿ ನವೀನ ಪ್ರಯೋಗ.

## 3.1 ಪೀಠಿಕೆ

ಕನ್ನಡ ಸಾಹಿತ್ಯವನ್ನು ಆರಂಭದಿಂದ ಅಧ್ಯಯನ ಮಾಡಿಕೊಂಡು ಬಂದಾಗ ನಮ್ಮ ಭಾಷೆ, ಛಂದಸ್ಸು, ಮೀಮಾಂಸೆಗಳು ಹೇಗೆ ಕ್ರಮೇಣ ವಿಕಾಸಗೊಂಡು , ತನ್ಮೂಲಕ ಭಾಷೆಯನ್ನು ದೇಸಿ ಅನುಭವ ಮತ್ತು ಪ್ರಯೋಗದತ್ತ ತಂದು ಕಾವ್ಯಕ್ಕೆ ಜೀವಂತಿಕೆಯನ್ನು ಮತ್ತೆ ಮತ್ತೆ ತರುವ ಯತ್ನವನ್ನು ಕನ್ನಡ ಸಾಹಿತ್ಯದ ವಿಕಾಸದ ಘಟ್ಟದಲ್ಲಿ ಮಾಡಿದ್ದಾರೆಂದು ಗಮನಿಸಿದಾಗ ಕನ್ನಡ ಸಾಹಿತ್ಯದ ಹಿರಿಮೆ ಅರ್ಥವಾಗುತ್ತದೆ.

ವಚನ ಚಳುವಳಿ ಕನ್ನಡ ಸಾತ್ಯದ ಜೀವಸೆಲೆಗೆ ಒಂದು ಉತ್ಕೃಷ್ಟ ಉದಾಹರಣೆಯಾಗುತ್ತದೆ ವಚನ ಕಾರರು ಪರಂಪರಗತವಾಗಿ ಬಂದ ಸಂಸ್ಕೃತದ ಮಾದರಿಯ ಛಂದಸ್ಸುಗಳನ್ನು, ಭಾಷೆಗಳನ್ನು, ವಸ್ತುಗಳನ್ನು ಕೈಬಿಟ್ಟು ಹೊಸ ಆವಿಷ್ಕಾರ ಮಾಡಿದರು. ಇದರಿಂದಾಗಿ ಚಂಪೂ ಶೈಲಿಗೆ ತೀರಾಭಿನ್ನವಾದ ವಚನ ಶೈಲಿ ಕನ್ನಡ ಸಾಹಿತ್ಯದಲ್ಲಿ ಒಂದು ಸಾಂಸ್ಕೃತಿಕ ಸಾಮಾಜಿಕ ಆಂದೋಲನಕ್ಕೆ ಕಾರಣ ವಾಗುತ್ತದೆ. ವಚನ ಕಾಲದ ಕವಿಗಳು ಹೊಸ ಹೊಸ ವೃತ್ತಗಳತ್ತ ಹೊರಳಿದರು. ಇದು ಹರಿಹರನಿಂದ ಆರಂಭವಾಯಿತು. ಆ ತಂತ್ರವನ್ನು ರಾಘವಾಂಕ ಮುಂದುವರೆಸಿದ ಅನಂತರ ಈ ಮಾರ್ಗದಲ್ಲಿ ಕುಮಾರವ್ಯಾಸನೆ ಮುಂತಾದ ಕವಿಗಳು ಬಂದರು ಇದರಿಂದಾಗಿ ಷಟ್ಪದಿ ಪ್ರಕಾರ ಕನ್ನಡ ಸಾಹಿತ್ಯಕ್ಕೆ ಅತ್ಯಂತ ರೋಚಕವಾದ ಮಟ್ಟಾಗಿ ಜನ ಮನಹನ್ನು ಗೆದ್ದುಕೊಟ್ಟಿತು. ಅನಂತರ ಅತ್ಯಂತ ಜನಪ್ರಿಯ ಕಾವ್ಯದ ಮಟ್ಟೂ ಆಯಿತು.

## 3.2 ಷಟ್ಪದಿಯ ಪರಿಚಯ

'ಷಟ್ಪದಿ, ಎಂದರೆ ಆರು ಸಾಲಿನ ಒಂದು ಪದ್ಯ 'ಷಟ್‌ಪದ' ಎಂದರೆ ಭ್ರಮರ. ದುಂಬಿಗು ಆರು ಕಾಲುಗಳಿವೆ ಈ ಪದ್ಯಕ್ಕೂ ಆರು ಪಾದಗಳಿವೆ. ಪದ್ಯವನ್ನು ಗಟ್ಟಿಯಾಗಿ ಲಯಬದ್ಧವಾಗಿ ಓದಿದರೆ ದುಂಬಿಯ ನಾದದ ಇಂಪು ಮತ್ತು ಗೇಯತೆ ಇದರಲ್ಲಿ ಕಂಡು ಬರುತ್ತದೆ. ಹಾಗಾಗಿ ಇದು ಅನ್ವರ್ಥಕವಾದುದು. ಷಟ್ಪದಿ ಅಚ್ಚಗನ್ನಡ ಮಟ್ಟು. ನಾಗವರ್ಮ ತನ್ನ ಛಂದೋಬುಧಿಯಲ್ಲಿ ಅಚ್ಚಗನ್ನಡ ಮಟ್ಟುಗಳನ್ನು ಹೇಳುವಾಗ ಇದನ್ನು ಉಲ್ಲೇಖಿಸುತ್ತಾನೆ. ಈ ಆರು ಸಾಲುಗಳಲ್ಲಿ ಮೊದಲ ಮೂರು ಸಾಲುಗಳು ಒಂದು ರೀತಿಯಲ್ಲೂ ಕೊನೆಯ ಮೂರು ಸಾಲುಗಳು ಮೊದಲ ಮೂರು ಸಾಲಿನಂತೆಯೂ ಇರುತ್ತದೆ. ಅಂದರೆ ಮೂರು ಸಾಲುಗಳ ಲಕ್ಷ್ಯ ಲಕ್ಷ್ಯಣವೇ ಕೊನೆಯ ಮೂರು ಸಾಲಿಗೂ ಅನ್ವಯವಾತ್ತದೆ.

ಮೊದಲು ದ್ರಾವಿಡ ಗಣ ಅಥವಾ ಅಂಶಗಣಗಳಿಂದ ರಚನೆಯಾದ ಈ ಷಟ್ಪದಿ ಕ್ರಮೇಣ ಮಾತ್ರಾಗಣವಾಗಿ ಹೊರಳ್ಳಿದ್ದನ್ನು ಗಮನಿಸಬಹುದು. ನಾಗವರ್ಮ ಇದರ ಲಕ್ಷಣವನ್ನು ಹೀಗೆ ಹೇಳುತ್ತಾನೆ.

ಮಂದರಧರಗಣಂ
ಬಂದಿರ್ಕಾಜಿಂತ್ಯದೊಳ್
ಕುಂದದೆ ನೆಲಸುಗೆ ಮದನಹರಂ|

ಇಂದು ನಿಭಾನನೆ
ಮುಂದಣ ತೆಱನೂಮೀ
ಯಂದಮಾದಂದು ಷಟ್ಪ[ದ] ಲಕ್ಷಣಂ||

ಮೊದಲ ಸಾಲಿನಲ್ಲಿ ಎರಡು ವಿಷ್ಣುಗಣ
ಎರಡನೆ ಸಾಲಿನಲ್ಲಿ ಎರಡು ವಿಷ್ಣುಗಣ

ಮೂರನೆಯ ಸಾಲಿನಲ್ಲಿ ಎರಡು ವಿಷ್ಣುಗಣ ಒಂದು ರುದ್ರಗಣ ಬರುತ್ತದೆ. ಹೀಗೆಯೇ ಸಾಲ್ಕು, ಐದು, ಆರನೆ ಸಾಲುಗಳು ಇರುತ್ತವೆ.

'ಷಟ್ಪದೀ ಕಥಾಸುಯೋಜ್ಯಾ' ಎಂಬ ಮಾತಿನಿಂದ ಕಥನ ಕಾವ್ಯದ ರಚನೆಗೆ ಇದು ಹೇಳಿ ಮಾಡಿಸಿದಂತಿದೆ.

ಒಂದು ಸಾಲಿನಿಂದ ಮತ್ತೊಂದು ಸಾಲಿಗೆ ಹರಿಯುತ್ತಾ, ಒಂದು ಪದ್ಯದಿಂದ ಮತ್ತೊಂದು ಪದ್ಯಕ್ಕೆ ಭಾಗವನ್ನು ಚಿಮ್ಮುತ್ತಾ ಸಾಗುವುದರಿಂದ ಬಹಳ ವಿಸ್ತಾರವಾಗಿ, ವಿರಾಮವಾಗಿ, ಕಥನಾತ್ಮಕವಾಗಿ, ವರ್ಣನಾತ್ಮಕವಾಗಿ ಹೇಳಲು ಇದಕ್ಕಿಂತ ಉತ್ಕೃಷ್ಟ ಮಟ್ಟು ಇನ್ನೊಂದಿಲ್ಲ. ಚಂಪೂ ಕಾವ್ಯದಲ್ಲಿ ಪ್ರಯೋಗ ಗೊಂಡ ಖ್ಯಾತ ಕರ್ನಾಟಕಗಳಿಗಿಂತಲೂ ಇದು ಹೆಚ್ಚು ಕಥನಾತ್ಮಕ ಪ್ರಯೋಗಕ್ಕೆ ಯುಕ್ತವಾದ ಮಟ್ಟು. ಹಾಗಾಗಿ ಇದು ಬಹುಬೇಗ ಜನಪ್ರಿಯವಾಗಲು ಕಾರಣವಾಯಿತು.

## 3.3 ಷಟ್ಪದಿಯ ಉಗಮ ಮತ್ತು ವಿಕಾಸ

ಕನ್ನಡದ ಮೊದಲ ಷಟ್ಪದಿ ಚಿತ್ರದುರ್ಗದ (ಕ್ರಿ.ಶ.ಸುಮಾರು.೧೦೨೫) ಶಾಸನದಲ್ಲಿ ದೊರೆಯುತ್ತದೆ. ಈ ಶಾಸನದ ಪಾದಗಳನ್ನು ಷಟ್ಪದಿಯ ಅಳತೆಗೆ ಹೊಂದಿಸಿ ಆ ಪಾಠಗಳನ್ನು ಸರಿ ಮಾಡಿ ಪ್ರೊ.ತೀ.ನಂ. ಶ್ರೀಕಂಠಯ್ಯನವರು ಶುದ್ಧ ಪಾಠವನ್ನು ಹೀಗೆ ಕಲ್ಪಿಸಿಕೊಡುತ್ತಾರೆ.

ಮಣ್ಣಲಿಗಾವ ಪ್ರ
ಚಣ್ಣ ಬಿವ್ವಿಗಂ ಜಯ
ಗೊಣ್ಣೇಶ್ವರಕ್ಕೆ ಬಿಟ್ಟುಂಬಳಿಯಂ
ಭಣ್ಣಣಕಳ್ಳದ
ಗಣ್ಣನೀಯಲ್ಕಾಂಪ
ಗಣ್ಣರ ಮಾಚಿಗನೆಯ್ದೆ ರಕ್ಷಿಪಂ

ಮೊದಲು ಅಂಶಗಣ ಘಟಿತವಾಗಿದ್ದ ಒಂದೇ ಷಟ್ಪದಿ ಕ್ರಮೇಣ ಮಾತ್ರಾಗಣದತ್ತ ಹೊರಳಿ ಆರು ಪ್ರಕಾರದಲ್ಲಿ ಪ್ರಯೋಗಕ್ಕೆ ಬಂದಿದ್ದನ್ನು ಗಮನಿಸ ಬಹುದು.

ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ, ವಾರ್ಧಕ, ಎಂಬುದಾಗಿ ಪ್ರಭೇದಗಳಿಗೆ ಕಾರಣವಾಯಿತು. ವಾರ್ಧಕದಲ್ಲಿ ರಾಘವಾಂಕನು ಭಾಮಿನಿಯಲ್ಲಿ ಕುಮಾರ ವ್ಯಾಸನು, ಅದ್ಭುತವಾದ ಕಾವ್ಯವನ್ನು ರಚಿಸುವ ಮೂಲಕ ಆ ಮಟ್ಟಿನ ಗೇಯತೆಯ ಸಾಧ್ಯತೆಯನ್ನು ಸಂಪೂರ್ಣವಾಗಿ ಬಳಸಿಕೊಂಡಿದ್ದಾರೆ.

## 3.4 ಷಟ್ಪದಿಯಲ್ಲಿ ರಚಿತವಾದ ಕಾವ್ಯಗಳು

ರಾಘವಾಂಕನ ಹರಿಶ್ಚಂದ್ರ ಚಾರಿತ್ರ, ಸಿದ್ಧರಾಮಚಾರಿತ್ರ, ವೀರೇಶ್ವರ ಚರಿತೆ, ಸೋಮನಾಥ ಚಾರಿತ್ರ; ಕುಮದೇಂದುವಿನ ಕುಮುದೇಂದು ರಾಮಾಯಣ; ಭೀಮಕವಿಯ ಬಸವ ಪುರಾಣ ಪದ್ಮರಾಜಪುರಾಣ (ಪದ್ಮಣಾಂಕ) ದೇವರಾಜನ ಅಮರುಕ, ಕುಮಾರವ್ಯಾಸನ ಕರ್ಣಾಟಕ ಭಾರತ ಕಥಾಮಂಜರಿ, ಭಾಸ್ಕರ ಕವಿಯ ಜೀವಂಧರ ಚರಿತ, ಲಕ್ಕಣ್ಣದಂಡೇಶನ ಶಿವತತ್ವ ಚಿಂತಾಮಣಿ, ಮಾಯಿದೇವನ ಏಕೋತ್ತರಶತಸ್ಥಲ, ಚಾಮರಸನ ಪ್ರಭುಲಿಂಗಲೀಲೆ, ಗುರುಬಸವನ ಶಿವಯೋಗಾಂಗ ಭೂಷಣ, ಸದ್ಗುರು ರಹಸ್ಯ, ಕಲ್ಯಾಣೇಶ್ವರ, ಸ್ವರೂಪಾಮೃತ, ವೃಷಭಗೀತೆ, ಮನೋವಿಜಯ ಕಾವ್ಯ, ಚಾಟುವಿಠನಾಥನ ಭಾಗವತ, ಭಾರತ, ಕನಕದಾಸರ ರಾಮಧಾನ್ಯ ಚರಿತ್ರೆ, ನಳಚರಿತ್ರೆ, ಹರಿಭಕ್ತಿಸಾರ, ಸಾಳ್ವನ ಸಾಳ್ವಭಾರತ ಬೆಳ್ಗುಳೇಶ್ವರಾಷ್ಟಕ, ಲಕ್ಷ್ಮೀಶ ಕವಿಯ ಜೈಮಿನಿ ಭಾರತ, ವಾದಿರಾಜರ ಸ್ವಪ್ನಗದ್ಯ ವಿರೂಪಾಕ್ಷಪಂಡಿತನ ಚನ್ನಬಸವಪುರಾಣ, ಗೋಪಕವಿಯ ನಂದಿ ಮಹಾತ್ಮ್ಯ, ಚಿತ್ರಭಾರತ, ನಾಗರಸನ ಕನ್ನಡ ಭಗವದ್ಗೀತೆ, ಮಹಾಲಿಂಗರಂಗನ ಅನುಭವಾಮೃತ, ಚಿದಾನಂದಾವಧೂತನ ಜ್ಞಾನ ಸಿಂಧು ಇತ್ಯಾದಿಗಳನ್ನು ಹೆಸರಿಸಬಹುದು.

## 3.5 ರಾಘವಾಂಕನ ಕಾಲ, ದೇಶ, ವಿಚಾರ

ರಾಘವಾಂಕನ ಕಾಲ ಯಾವುದೆಂದು ಹೇಳುವಾಗ ರಾಘವಾಂಕ ತನ್ನ ಬಗ್ಗೆ ಏನನ್ನೂ ಹೇಳಿರದಿದ್ದರಿಂದ ಊಹಿಸಬೇಕಾಗುತ್ತದೆ. ಹರಿಹರನ ಸೋದರಳಿಯ, ಸಮಕಾಲೀನ ಹಾಗೂ ಕರೆಯ ಪದ್ಮರಸನಕಾಲದಲ್ಲಿದ್ದವನು ಎಂದು ಹೇಳಬಹುದು. ದೇವರಾಜ ಪ್ರತಾಪರುದ್ರ, ಹೊಯ್ಸಳ ವೀರಬಲ್ಲಾಳ ರಾಜರುಗಳ ಹೆಸರು ಈ ಮೂವರು ಕವಿಗಳ ಹೆಸರಿನ ಜತೆ ಕೇಳಿ ಬರುತ್ತದೆ. ಈ ಕಾರಣದಿಂದ ರಾಘವಾಂಕನ ಕಾಲವನ್ನೂ ಕೂಡ ಹರಿಹರನ ಕಾಲವೇ ಎಂದು ಹೇಳಲಾಗುತ್ತದೆ. ಅಂದರೆ ೧೨ನೇ ಶತಮಾನದ ಮಧ್ಯಭಾಗದಿಂದ ೧೩ನೇ ಶತಮಾನದ ಮಧ್ಯಭಾಗದವರೆಗಿನ ಅವಧಿಯಲ್ಲಿ ಬದುಕಿದ್ದನೆಂದು ತಿಳಿಯಲಾಗಿದೆ. ಇದರಿಂದ ರಾಘವಾಂಕನ ಕಾಲವು ಸುಮಾರು ೧೨೨೫ ಎಂದು ಹೇಳಬಹುದು.

### 3.5.1 ದೇಶ

ರಾಘವಾಂಕನ ಜನ್ಮಸ್ಥಳವು ಹಂಪೆ ಎಂದು ಭಾವಿಸಲಾಗಿದೆ. ಅವನ ತಂದೆ-ತಾಯಿಯರ ಹೆಸರು ಮಹದೇವಭಟ್ಟ, ಮತ್ತು ರುದ್ರಾಣಿ. ಶಂಕರಪ್ರಭು, ಮಾದಿರಾಜ, ಮಹಾದೇವ, ಹರಿಹರ ಕವಿ ಇವರು ರಾಘವಾಂಕನ ಗುರುಗಳು, ಪಂಪಾ ಕ್ಷೇತ್ರದ ರಾಜನಾದ ದೇವರಾಜನು 'ಕವಿಶರಭ ಭೇರುಂಡ'ಎಂಬ ಬಿರುದನ್ನು ಕೊಟ್ಟಿದ್ದನ್ನು ರಾಘವಾಂಕನು ಓರಂಗಲ್ಲಿನ ಪ್ರತಾಪರುದ್ರ ರಾಜನ ಆಸ್ಥಾನಕ್ಕೆ ಹೋಗಿ ವೀರೇಶ ಚರಿತೆಯನ್ನು ಸಾದರಪಡಿಸಿದನು. ಕಾಳಿದಾಸ, ಬಾಣ, ಭೋಜ ಮುಂತಾದ ಹಿಂದಿನ ಕವಿಗಳನ್ನು ಸ್ಮರಿಸಿದ್ದಾನೆ.

### 3.5.2 ಕೃತಿಗಳು

ರಾಘವಾಂಕನು ಒಟ್ಟು, ಆರು ಕಾವ್ಯಗಳನ್ನು ರಚಿಸಿದ್ದಾನೆ. ಅವುಗಳು ಹರಿಶ್ಚಂದ್ರ ಕಾವ್ಯ, ಸಿದ್ಧರಾಮಚಾರಿತ್ರ, ಸೋಮನಾಥ ಚಾರಿತ್ರ, ವೀರೇಶ್ವರ ಚಾರಿತ್ರ, ಶರಭ ಚಾರಿತ್ರ, ಹರಿಹರ ಮಹತ್ವ, ಇವುಗಳಲ್ಲಿ ಕೊನೆಯ ಎರಡು ಕೃತಿಗಳು ಸಿಕ್ಕಿಲ್ಲ. ಆದರೆ ಬರೆದಿರುವುದಕ್ಕೆ ಆಧಾರಗಳಿವೆ.

### 3.5.3 ಕೃತಿಪರಿಚಯ : ಹರಿಶ್ಚಂದ್ರ ಕಾವ್ಯ

ಇದು ರಾಘವಾಂಕನ ಪ್ರಸಿದ್ಧವಾದ ಕೃತಿ, ಇದರ ಬಗ್ಗೆ ಒಂದು ಕಥೆಯೂ ಪ್ರಚಾರದಲ್ಲಿದೆ. ಅಂದರೆ ರಾಘವಾಂಕನು ತನ್ನ ಕೃತಿಯ ಶ್ರೇಷ್ಠತೆಯನ್ನು ತಿಳಿಸಿಕೊಟ್ಟು 'ನೀವು ಚೋಳಾದಿಗಳ ಕಥೆಯನ್ನು ಹೇಳಿದ್ದೀರಲ್ಲ' ಎಂದು ವಾದಿಸಿದಾಗ ಹರಿಹರನು 'ಹರಿಶ್ಚಂದ್ರನು ಭಕ್ತರ ಗುಂಪಿಗೆ ಸೇರುವುದಿಲ್ಲ' ಎಂದು ತಿಳಿಸುತ್ತಾನೆ. ರಾಘವಾಂಕನೂ ಸುಮ್ಮನಿರದೆ ಆ ಭಕ್ತರಿಗಿಂತ ಹರಿಶ್ಚಂದ್ರ ದೊಡ್ಡವನು ಎಂದು ಹೇಳಿ ಹರಿಹರನನ್ನು ಸಿಟ್ಟಿಗೆಬ್ಬಿಸುತ್ತಾನೆ. ಹರಿಹರ ಸುಮ್ಮನಿರದೆ ಚಪ್ಪಲಿಯಲ್ಲಿ ರಾಘವಾಂಕನ ಮುಖಕ್ಕೆ ಹೊಡೆಯುತ್ತಾನೆ. ಆಗ ರಾಘವಾಂಕನ ಐದು ಹಲ್ಲುಗಳು ಉದುರಿ ಹೋಗುತ್ತವೆ. ಹರಿಹರನು ರಾಘವಾಂಕನಿಗೆ 'ಐದು ಶೈವ ಕೃತಿಗಳನ್ನು ಬರೆದು ತಂದರೆ ನಿನ್ನ ಹಲ್ಲುಗಳು ಹುಟ್ಟಿಕೊಳ್ಳುತ್ತವೆ' (?) ಎಂದು ಹೇಳುತ್ತಾನೆ. ಅದೇ ರೀತಿ ರಾಘವಾಂಕ ಐದು ಶೈವ ಕೃತಿಗಳನ್ನು ಬರೆದು ಹಲ್ಲುಗಳನ್ನು ಪಡೆದುಕೊಳ್ಳುತ್ತಾನೆ.

ಹರಿಶ್ಚಂದ್ರನ ಕಥೆಯು ಪುರಾಣಗಳಲ್ಲಿ ಮತ್ತು ಮಹಾಭಾರತದಲ್ಲಿ ಸಿಗುತ್ತದೆ. ಮೂಲದಲ್ಲಿ ಹರಿಶ್ಚಂದ್ರ ವರುಣನಿಗೆ ಸುಳ್ಳು ಹೇಳಿದ ಪ್ರಸಂಗವೂ ಇದೆ. ಆದರೆ ಮೂಲ ಕಥೆಯನ್ನು ರಾಘವಾಂಕನು ತನಗೆ ಬೇಕಾದಂತೆ ಬಳಸಿಕೊಂಡು ಶಿಲೆಯಿಂದ ಅದ್ಭುತ ಶಿಲ್ಪವನ್ನು ಕೆತ್ತಿದ್ದಾನೆ.

### 3.5.4 ಕಥಾವಸ್ತು

ಸತ್ಯಕ್ಕಾಗಿ ಸರ್ವಸ್ವವನ್ನೂ ಕಳೆದುಕೊಂಡು, ಕಡೆಗೆ ತನ್ನ ಸತ್ಯದಿಂದಲೇ ಸರ್ವಸ್ವವನ್ನು ಮತ್ತು ದೈವ ಕೃಪೆಯನ್ನು ಪಡೆದುಕೊಂಡ ರಾಜ ಹರಿಶ್ಚಂದ್ರನ ಜೀವನ ಚರಿತ್ರೆಯೇ ಈ ಕಾವ್ಯದ ಕಥಾವಸ್ತು. ಈ ಕಥೆಯು ಜನಜನಿತವಾಗಿರುವುದರಿಂದ, ಭಾರತೀಯರ ಸಂಸ್ಕೃತಿಯಲ್ಲಿ ಸೇರಿ ಕರಗಿ ಹೋಗಿರುವುದರಿಂದ ನಿಮಗೆಲ್ಲರಿಗೂ ಹರಿಶ್ಚಂದ್ರ ಕಾವ್ಯದ ಕಥೆಯು ತಿಳಿದೇ ಇದೆ. ಆದ್ದರಿಂದ ಕಥೆಯನ್ನು ಹೇಳುವುದು ಗುಡ್ಡಕ್ಕೆ ಕಲ್ಲು ಹೊತ್ತ ಹಾಗೆ ಅಲ್ಲವೆ.

### 3.5.5 ಪಾತ್ರ ಪರಿಚಯ

#### ಅ) ಹರಿಶ್ಚಂದ್ರ

ಸತ್ಯ ಹರಿಶ್ಚಂದ್ರನೆಂದೇ ಪ್ರಖ್ಯಾತನಾಗಿರುವ ಈ ವ್ಯಕ್ತಿಯನ್ನು ಯಾರು ತಿಳಿದಿಲ್ಲ ಹೇಳಿ. ಗಾಂಧೀಜಿಯವರ ಮೇಲೆ ದೊಡ್ಡ ಪ್ರಭಾವವನ್ನು ಬೀರಿದ ವ್ಯಕ್ತಿ ಇವನು. ಹಾಸ್ಯಮಾಡಲೂ ಕೂಡ ಈತನ ಹೆಸರನ್ನು ಹೇಳುವುದಿಲ್ಲವೆ. ಅದೆಲ್ಲ ನಿಮಗೆ ಗೊತ್ತು. ಆದರೆ ಹರಿಶ್ಚಂದ್ರನ ವ್ಯಕ್ತಿತ್ವವನ್ನು ಸರಿಯಾಗಿ ತಿಳಿದುಕೊಳ್ಳಬೇಕು. ಹರಿಶ್ಚಂದ್ರನು ಸತ್ಯಕ್ಕೆ ತನ್ನನ್ನು ಪೂರ್ಣವಾಗಿ ಸಮರ್ಪಿಸಿಕೊಂಡ. ಸತ್ಯ ಒಂದು ಆದರ್ಶವಾಗಿ ಇತ್ತು. ಆದರೆ ಅದಕ್ಕೆ ಜೀವದಾನ ಮಾಡಿ ಜಾಗೃತವಾಗುವಂತೆ ಹರಿಶ್ಚಂದ್ರನು ಮಾಡಿದುದೇ ಇಲ್ಲಿ ಮುಖ್ಯವಾದುದು. ವಸಿಷ್ಠ, ವಿಶ್ವಾಮಿತ್ರರ ವಾಗ್ಯುದ್ಧದಲ್ಲಿ ಹರಿಶ್ಚಂದ್ರ ಸಿಕ್ಕಿ ಪಡಬಾರದ ಕಷ್ಟ ಪಡಬೇಕಾಯಿತು. ಆತನ ಸತ್ವ ಲೋಕಕ್ಕೆ ತಿಳಿಯಿತು. ಇಲ್ಲದಿದ್ದರೆ ಲಕ್ಷಾಂತರ ವಕೀಲರ ಪೈಕಿ ಅವರೂ ಒಬ್ಬರಾಗಿ ಜನಮಾನಸದಿಂದ ಎಂದೋ ಮರೆಯಾಗುತ್ತಿದ್ದರು. ಎಷ್ಟು ಜನ ರಾಜ ಮಹಾರಾಜರು ಈ ಭೂಮಿಯಲ್ಲಿ ಆಗಿ ಹೋದರೋ ! ಆದರೆ ಹರಿಶ್ಚಂದ್ರನಂತೆ ಪ್ರಖ್ಯಾತರಾದವರು ಯಾರು ? ಸುಳ್ಳು ಹೇಳಬಾರದು, ಕೊಟ್ಟ ಮಾತಿಗೆ ತಪ್ಪಬಾರದು ಇವೆರಡೂ ಅವನ ಕಣ್ಣ ಮುಂದಿದ್ದ ಆದರ್ಶಗಳು. ಅದಕ್ಕಾಗಿ ರಾಜ್ಯವನ್ನು, ಮಗನನ್ನು, ಪತ್ನಿಯನ್ನು ಕಡೆಗೆ ತನ್ನನ್ನೂ ಕಳೆದುಕೊಂಡು ಸ್ಮಶಾನದ ಕಾವಲುಗಾರನಾಗಿ ಬದುಕತೊಡಗಿದ. ಚಿನ್ನವನ್ನು ಕಾಯಿಸಿ ಕೊಳೆಯನ್ನು ತೆಗೆದುಹಾಕಿದ

ಬಳಿಕ ಅದು ಅಪರಂಜಿಯಾದಂತೆ ಹರಿಶ್ಚಂದ್ರನನ್ನು ಕಷ್ಟದ ಬೆಂಕಿಯು ಪರಿಶುದ್ಧಾತ್ಮನನ್ನಾಗಿಸಿತು. ಮಮಕಾರ, ಅಹಂಕಾರಗಳನ್ನು ಗೆದ್ದು ಪತ್ನಿಯ ಕುತ್ತಿಗೆಯನ್ನು ಕತ್ತರಿಸಲು ಸಿದ್ಧನಾದಾಗ ಅವನ ಮನಸ್ಸು ನಿರ್ವಿಕಾರವೂ ನಿರಂಜನವೂ ಆದ ಸ್ಥಿತಿಯನ್ನು ತಲುಪಿತ್ತು. ಆದ್ದರಿಂದಲೇ ಶಿವನು ಪ್ರತ್ಯಕ್ಷನಾಗಬೇಕಾಯಿತು. ಹರಿಶ್ಚಂದ್ರನಿಗೆ ಏನೂ ಬೇಕಿಲ್ಲದ ಸ್ಥಿತಿಯಲ್ಲಿ ಶಿವನು ಪುನಃ ಎಲ್ಲವನ್ನೂ ಕೊಡುತ್ತಾನೆ. ಅವನಿಗೆ ಮೊದಲಿದ್ದ ಸ್ವಾಮಿತ್ವ ಭಾವವು ಅಳಿದು ಈಗ ಕೇವಲ ಒಬ್ಬ ಧರ್ಮದರ್ಶಿ (ಟ್ರಸ್ಟಿ)ಯಂತೆ ಎಲ್ಲವನ್ನು ನೋಡುತ್ತಾನೆ. ಇದಕ್ಕಿಂತ ದೊಡ್ಡ ಸಾಧನೆ ಇನ್ನೇನೂ ಉಳಿದಿಲ್ಲವೆಂದು ಬ್ರಹ್ಮರ್ಷಿಗಳೇ ಘೋಷಿಸುತ್ತಾರೆ. ಆದಕ್ಕಿಂತ ಯಾವ ಪ್ರಮಾಣ ಪತ್ರ ಬೇಕು ಹೇಳಿ.

**ಆ) ವಿಶ್ವಾಮಿತ್ರ**

ಈತನು ಒಬ್ಬ ಬ್ರಹ್ಮರ್ಷಿ. ಆದರೆ ವಸಿಷ್ಠನೊಡನೆ ಏಕೆ ಜಗಳ ಪ್ರಾರಂಭಿಸಿದ ಎಂಬುದೊಂದು ಸೋಜಿಗ. ಬ್ರಹ್ಮರ್ಷಿಯಾದರೇನು ಹುಟ್ಟುಗುಣ ಸುಟ್ಟರೂ ಹೋಗದು ಎನ್ನುವರಲ್ಲವೆ. ಆದರೆ ಅಷ್ಟು ದುಡುಕಬೇಡಿ. ವಿಶ್ವಾಮಿತ್ರನನ್ನು ಅರ್ಥಮಾಡಿಕೊಳ್ಳುವುದು ಅಷ್ಟು ಸುಲಭವಲ್ಲ. ಮಂಥರೆ ಇಲ್ಲದೆ ಇದ್ದಿದ್ದರೆ ಶ್ರೀರಾಮನ ಸತ್ವ ಎಲ್ಲಿ ಪ್ರಕಟವಾಗುತ್ತಿತ್ತು. ಒಬ್ಬ ರಾಜನಾಗಿ ಆಳಿ ಅಳಿದು ಹೋಗುತ್ತಿದ್ದ ಅಲ್ಲವೆ. ಹಾಗೆಯೇ ವಿಶ್ವಾಮಿತ್ರನೂ ಕೂಡ ಎಲ್ಲರಿಂದ ಬೈಸಿಕೊಳ್ಳುವ ಖಳನಾಯಕನಾಗಿಬಿಟ್ಟನು. ಆದರೆ ಕಡೆಯಲ್ಲಿ ಅವನ ಉದ್ದೇಶವೇನಿತ್ತು ಎಂಬುದು ಬಹಿರಂಗವಾಗುತ್ತದೆ. ಆದರೆ ಹರಿಶ್ಚಂದ್ರನು ರಾಜ್ಯವನ್ನು ಕಳೆದುಕೊಳ್ಳುವುದನ್ನು, ಕಾಡಿನಲ್ಲಿ ಕಷ್ಟಪಟ್ಟು ನಡೆಯುವುದನ್ನು, ಚಂದ್ರಮತಿ ಕಷ್ಟದ ಜೀವನ ಸಾಗಿಸುವುದನ್ನು, ಲೋಹಿತಾಶ್ವನ ದೀನ ಸ್ಥಿತಿಯನ್ನು, ಹರಿಶ್ಚಂದ್ರ ಸುಡುಗಾಡು ಕಾಯುವ ಚಂಡಾಲನಾದುದನ್ನು, ಲೋಹಿತಾಶ್ವ ಸಾಯುವುದನ್ನು ಚಂದ್ರಮತಿಯು ಮರಣದಂಡನೆಗೆ ಗುರಿಯಾಗಿ ತಲೆಯನ್ನು ಕತ್ತರಿಸುವ ವಧಾಸ್ಥಳದಲ್ಲಿ ಕುತ್ತಿಗೆಯನ್ನಿಡುವುದನ್ನು.. ಇತ್ಯಾದಿ ಒಂದೊಂದನ್ನು ನೋಡಿದಾಗಲೂ ನಮಗೆ ವಿಶ್ವಾಮಿತ್ರನ ಒಳಗುಟ್ಟನ್ನು ಗುಟ್ಟಾಗಿಯೇ ಇಟ್ಟು ಕಡೆಯಲ್ಲಿ 'ಕುಡಿದ ಔಷಧವು ಬಾಯಿಗೆ ಕಹಿಯಾದರೂ ಹೊಟ್ಟೆಯನ್ನು ಸೇರಿ ಸುಖವನ್ನು ಕೊಡುವಂತೆ, ಜನರ ಕಣ್ಣಿಗೆ ಕೋಪಿಸಿದಂತೆ ಕಂಡರೂ ಹರಿಶ್ಚಂದ್ರನು ಸತ್ಯ ಶುದ್ಧನಾಗುವವರೆಗೂ ಕಾಡಿ ಅವನ ಕೀರ್ತಿಯನ್ನು ಮೂರು ಲೋಕಕ್ಕೂ ಹಬ್ಬಿಸಿದ ಮುನಿಶ್ರೇಷ್ಠನು ವಸಿಷ್ಠನೊಡನೆ ಬಂದನು'ಎಂದು ಹೇಳಿದಾಗ ನಮಗೆ ದಿಗ್ಭ್ರಮೆಯಾಗುತ್ತದೆ ಅಲ್ಲವೆ. ಕವಿ ಗೆಲ್ಲುತ್ತಾನೆ, ನಾವು ಸೋಲುತ್ತೇವೆ.

### 3.5.6 ವಿಶಿಷ್ಟ ಸಂದರ್ಭಗಳು

**ಅ) ಹರಿಶ್ಚಂದ್ರ - ಚಂಡಾಲಕನ್ನಿಕೆಯರ ವಾದವಿವಾದ**

ಹರಿಶ್ಚಂದ್ರನು ಕಾರಣಾಂತರದಿಂದ ವಿಶ್ವಾಮಿತ್ರನ ಆಶ್ರಮವನ್ನು ಪ್ರವೇಶಿಸಿದಾಗ ಋಷಿಗೆ ಋಷಿಯಾಗುತ್ತದೆ. ಹರಿಶ್ಚಂದ್ರನನ್ನು ಅಸತ್ಯವಂತನನ್ನಾಗಿಸಬೇಕೆಂದು ಕಾದಿದ್ದ ಮುನಿಯು ಚಂಡಾಲ ಕನ್ನಿಕೆಯರನ್ನು ಸೃಷ್ಟಿಸಿ ಹರಿಶ್ಚಂದ್ರನನ್ನು ಮರುಳುಗೊಳಿಸಿ ವಿವಾಹವಾಗು ಎಂದು ಹೇಳಿ ಕಳುಹಿಸುತ್ತಾನೆ. ಈ ಕಪ್ಪು ಸುಂದರಿಯರು ಬಂದು ಹಾಡಿ ನರ್ತಿಸುತ್ತಾರೆ. ಅವರು ರಾಜನ ಮುತ್ತಿನ ಛತ್ರಿಯನ್ನು ಕೇಳಿ ನಿರಾಶರಾಗುತ್ತಾರೆ. ಕಡೆಗೆ 'ನೀನೆಮಗೆ ವಲ್ಲಭನಾಗಿ ಚಿತ್ತದ ಉಮ್ಮಳಿಕೆಯನ್ನು ಕಳೆ'ಎನ್ನುತ್ತಾರೆ. ಹೀಗೆ ಮಾತು ಬೆಳೆದು ಚಮತ್ಕಾರದ ವಾದ ವಿವಾದಗಳು ನಡೆಯುತ್ತವೆ. ಹರಿಶ್ಚಂದ್ರನು ಸೈರಣೆಗೆಟ್ಟು ಚಾಟಿಯಿಂದ ಕನ್ನಿಕೆಯರಿಗೆ ಹೊಡೆಸುತ್ತಾನೆ. ವಿಶ್ವಾಮಿತ್ರನ ಕೋಪ ಭುಗಿಲೇಳುತ್ತದೆ. ಇಲ್ಲಿಂದ ಮುಂದೆ ಕಷ್ಟಪರಂಪರೆಗಳು ರಾಜನಿಗೆ ಉಂಟಾಗುತ್ತವೆ. ರಾಜ ಮತ್ತು ಕನ್ನಿಕೆಯರ ಸಂಭಾಷಣಾ ಭಾಗವು ಕಲಾತ್ಮಕವಾಗಿದೆ. ವೈಚಾರಿಕತೆಯಿಂದ ಕೂಡಿದೆ, ಸ್ವಾರಸ್ಯಪೂರ್ಣವಾಗಿದೆ. ಈ ಕಾವ್ಯದಲ್ಲಿ ಬರುವ ಅಪೂರ್ವ ಸನ್ನಿವೇಶಗಳಲ್ಲಿ ಇದು ಒಂದು.

### ಆ) ವೀರಬಾಹು ಪ್ರಸಂಗ

ಹರಿಶ್ಚಂದ್ರನು ತನ್ನ ಹೆಂಡತಿ ಮಕ್ಕಳನ್ನು ಮಾರಿದರೂ ನಕ್ಷತ್ರಿಕನಿಗೆ ಕೊಡಬೇಕಾದಷ್ಟು ಹಣವು ಒದಗಲಿಲ್ಲ. ಕಡೆಗೆ ತನ್ನನ್ನು ತಾನು ಮಾರಿಕೊಳ್ಳುವುದೊಂದು ಉಳಿಯಿತು. ಹರಿಶ್ಚಂದ್ರನನ್ನು ಕೊಂಡುಕೊಳ್ಳಲು ಯಾರೂ ಮುಂದೆ ಬಾರದಿರುವುದನ್ನು ನೋಡಿ ಅವನಿಗೇ ಕಳವಳವುಂಟಾಗುತ್ತದೆ. ತಾನು ಅಸತ್ಯವಂತನಾಗಿ ಬಿಟ್ಟರೆ ಕಡೆಗೂ ಕೆಟ್ಟ ಹೆಸರು ಉಂಟಾಗುತ್ತದೆ. ಇದುವರೆಗೆ ಪಟ್ಟ ಶ್ರಮ ವ್ಯರ್ಥವಾಗುತ್ತದೆ ಎಂದು ಉಮ್ಮಳಿಸುತ್ತಾನೆ. ಆಗ ಚಂಡಾಲ ವೀರಬಾಹು ಕೊಳ್ಳಲು ಮುಂದೆ ಬಂದಾಗ ಹರಿಶ್ಚಂದ್ರನ ಕುಲದ ಅಭಿಮಾನ ಅಡ್ಡಿಯಾಗುತ್ತದೆ. ಹರಿಶ್ಚಂದ್ರ ಎಂತಹ ದೊಡ್ಡ ವ್ಯಕ್ತಿಯಾದರೂ ಆತನಲ್ಲಿಯೂ ಇರುವ ದೋಷಗಳ ಕಡೆ ಕವಿಯು ಗಮನಕೊಟ್ಟಿದ್ದಾನೆ. ಆತನು ಪರಿಪೂರ್ಣವಾಗಿ ಶುದ್ಧನಾಗಬೇಕು. ಅದಕ್ಕಾಗಿ ಚಂಡಾಲನ ಸೇವಕನಾಗಬೇಕು. ವೀರಬಾಹು 'ಯಾರು ಮೇಲು ಯಾರು ಕೀಳು? ಸುಳ್ಳಾಡದ ನಾನು ಚಂಡಾಲನೋ, ಸುಳ್ಳು ಹೇಳುವ ನೀನು ಚಂಡಾಲನೋ'ಎಂದು ಅವನ ಮಾತನ್ನು ಅವನಿಗೇ ತಿರುಗಿಸುತ್ತಾನೆ. ಸ್ವಲ್ಪ ಹೊತ್ತಿಗೆ ಮೊದಲು 'ಯಾರಾದರೂ ಕೊಳ್ಳಬಹುದು'ಎಂದು ಘೋಷಿಸಲಿಲ್ಲವೆ, ಇಲ್ಲ ಎನ್ನು ನಾನು ಹೋಗುತ್ತೇನೆ ಎಂದಾಗ ಹರಿಶ್ಚಂದ್ರ ತಲೆ ಬಾಗುತ್ತಾನೆ. ಈಗ ಅವನ ಕುಲಮದ, ಅಹಂಕಾರಗಳಳಿಯುವುದು ಕಂಡು ಬರುತ್ತದೆ. ಕವಿಯು ಕ್ರಮಕ್ರಮವಾಗಿ ಅವನನ್ನು ಸತ್ಯಸಾಕ್ಷಾತ್ಕಾರದ ಕಡೆಗೆ ಕೊಂಡೊಯ್ಯುವುದನ್ನು ಕಾಣುತ್ತೇವೆ.ಇಂತಹ ಸನ್ನಿವೇಶಗಳೇ ಒಂದು ಕಾವ್ಯದ ಶ್ರೇಷ್ಠತೆಗೆ ಕಾರಣ ವಾಗುತ್ತವೆ.

## 3.6 ಕೃತಿಪರಿಚಯ : ಸಿದ್ಧಾರಾಮ ಚಾರಿತ್ರ

### 3.6.1 ಆಕರ

ಈ ಕಾವ್ಯದ ಮಸ್ತುವೆಂದರೆ ಸಿದ್ಧರಾಮನ ಜೀವನ. ಸಿದ್ಧರಾಮನು ಹನ್ನೆರಡನೆ ಶತಮಾನದ ಶಿವಶರಣ, ಕರ್ಮಯೋಗಿ, ವಚನಕಾರ, ರಾಘವಾಂಕನು ಜನರಲ್ಲಿ ಹರಡಿದ್ದ ವೃತ್ತಾಂತಗಳನ್ನು ಸಂಗ್ರಹಿಸಿ ಹರಿಹರನ ಉಲ್ಲೇಖಗಳನ್ನು ಬಳಸಿಕೊಂಡು ಮತ್ತು ಸಿದ್ಧರಾಮನ ವಚನಗಳನ್ನೂ ಆಧರಿಸಿ ತನ್ನ ಕಾವ್ಯದ ಕಥಾವಸ್ತುವನ್ನು ಸಿದ್ಧಪಡಿಸಿಕೊಂಡಿದ್ದಾನೆ.

### 3.6.2 ಕಥಾವಸ್ತು

ಈ ಕಾವ್ಯದ ಕಥೆಯನ್ನು ಕವಿಯು ಪುರಾಣ ಸದೃಶವಾಗಿಸಲು ಕೈಲಾಸದಿಂದ ಪ್ರಾರಂಭಿಸುತ್ತಾನೆ. ಊರ್ಧ್ವಶಿರ, ಅದ್ರಿಶಿರ ಎಂಬ ಗಂಧರ್ವರು ಭೃಂಗಿಯನ್ನು ಕಂಡು ನಗುತ್ತಾರೆ. ಅವರಿಗೆ ಅದರಿಂದ ನರಜನ್ಮ ಪ್ರಾಪ್ತವಾಗುತ್ತದೆ. ನಿರ್ಮಾಯನಾದ ವಿಜ್ಞಾನಿಯು ಮಗನಾಗಿ ಹುಟ್ಟುವುದರಿಂದಾಗಿ ಶಾಪ ಪರಿಹಾರವಾಗುತ್ತದೆಂಬ ಅಭಯದೊಡನೆ ಭೂಮಿಯಲ್ಲಿ ಹುಟ್ಟುತ್ತಾರೆ. ಅವರೇ ಸೊನ್ನಲಿಗೆಯ ಮುದ್ದಣ್ಣ ಮತ್ತು ಸುಗ್ಗವ್ವೆ. ಅವರ ಮಗನೇ ಸದ್ದರಾಮ. ಆದರೆ ಅವನ ಹುಟ್ಟು ಹೆಸರು ಧೂಳಿಮಾಕಾಳ ಎಂಬುದು. ಶೈಶವ ಮತ್ತು ಬಾಲ್ಯಗಳನ್ನು ಕವಿಯು ತುಂಬಾ ಏಕಾಗ್ರತೆಯಿಂದ ಚಿತ್ರಿಸಿದ್ದಾನೆ. ಸಿದ್ಧರಾಮನು ದನಕರುಗಳನ್ನು ಮೇಯಿಸಿಕೊಂಡು ಬರುವ ಕೆಲಸಮಾಡುತ್ತಾನೆ. ಹಾಗೆ ಹೋದಾಗ ಅಲ್ಲಿಯೇ ಲಿಂಗವನ್ನು ರೂಪಿಸಿ ಪೂಜಿಸುತ್ತಾನೆ. ಅವನ ಭಕ್ತಿಯು ಗುಪ್ತವಾಗಿಯೇ ಇರುತ್ತದೆ. ಒಂದು ದಿನ ಶಿವನು ವೇಷ ಮರೆಸಿಕೊಂಡು ಬಂದು ನಿಜರೂಪವನ್ನೂ ತೋರಿಸಿ ತನ್ನ ಜಾಗವನ್ನೂ ತಿಳಿಸಿ ಅವಲಕ್ಕಿಯನ್ನು ತಂದುಕೊಡುವಂತೆ ಕೇಳುತ್ತಾನೆ. ಆದರೆ ಸಿದ್ಧರಾಮನು ಹಿಂದಿರುಗಿದಾಗ ಸ್ವಾಮಿಯು ಇಲ್ಲದಿರುವುದನ್ನು ಕಂಡು ಯಾತ್ರಿಕರೊಡನೆ ಶ್ರೀಶೈಲ ಕ್ಷೇತ್ರಕ್ಕೆ ಹೋಗುತ್ತಾನೆ. ಅಲ್ಲಿ ಅತೀಂದ್ರಿಯ ಅನುಭವವನ್ನು ಪಡೆದು ಹಿಂದಿರುಗಿ ಬಂದು ಲೋಕೋಪಕಾರಿಯಾಗಿ ಬದುಕಲು ನಿರ್ಧರಿಸಿ ಸೊನ್ನಲಿಗೆಗೆ ಬರುತ್ತಾನೆ. ಮುಂದೆ ಒಂದು ದಿನ ಅವನಿಗೆ ಅಲ್ಲಮನ ಭೇಟಿಯಾಗುತ್ತದೆ. ಅನಂತರ ಬಸವಾದಿ ಪ್ರಮಥರ ಪರಿಚಯವೂ

ಆಗುತ್ತದೆ. 'ಶಿವಯೋಗಿಯ ಶರೀರಂ ವೃಥಾ ಸವೆಯಲಾಗದು' ಎಂಬ ತತ್ವವನ್ನು ಹಿಡಿದು ಕರ್ಮಯೋಗಿಯಾಗಿದ್ದವನು ಅನಂತರ ಶಿವಯೋಗಿಯಾಗುತ್ತಾನೆ. ಸೊನ್ನಲಿಗೆಯಲ್ಲಿಯೇ ಸಮಾಧಿ ಹೊಂದುತ್ತಾನೆ. ಈ ಕಥೆಯೊಡನೆ ಅನೇಕ ಮಹಿಮೆಗಳು, ಪವಾಡಗಳು, ಉಪಕಥೆಗಳು ಸೇರಿಕೊಂಡಿವೆ.

## 3.7 ಕೃತಿ ಪರಿಚಯ : ಸೋಮನಾಥ ಚಾರಿತ್ರ

### 3.7.1 ಆಕರ

ಈ ಕಾವ್ಯದ ಕಥಾವಸ್ತುವೆಂದರೆ ವಚನಕಾರ ಆದಯ್ಯನ ಜೀವನ, ಹರಿಹರನ ಆದಯ್ಯನ ರಗಳೆ ಮತ್ತು ಜನಪದದಲ್ಲಿದ್ದ ಕಥೆಗಳು, ಆದಯ್ಯನೇ ರಚಿಸಿರುವ ವಚನಗಳು ಇವೆಲ್ಲವೂ ಈ ಕಾವ್ಯದ ಆಕರಗಳಾಗಿವೆ.

### 3.7.2 ಕಥಾವಸ್ತು

ಸೌರಾಷ್ಟ್ರದ ಸೋಮನಾಥ ದೇವರನ್ನು ಆದಯ್ಯನು ಪುಲಿಗೆರೆಯ ಜೈನ ಬಸದಿಯಲ್ಲಿ ಸ್ಥಾಪಿಸಿ ಜೈನರನ್ನು ವೀರಶೈವರನ್ನಾಗಿ ಪರಿವರ್ತಿಸಿದುದೇ ಈ ಕಾವ್ಯದ ಕಥಾವಸ್ತು. ಇಲ್ಲಿಯೂ ಕೂಡ ಪೌರಾಣಿಕ ಹಿನ್ನೆಲೆಯಿಂದಲೇ ತನ್ನ ಕಾವ್ಯವನ್ನು ಪ್ರಾರಂಭಿಸಿದ್ದಾನೆ. ಪುಲಿಗೆರೆಯ ಜೈನರು ಶಿವನನ್ನು ಹಂಗಿಸಿ ನಿಂದಿಸುತ್ತಾರೆಂಬ ವರದಿಯನ್ನು ನಾರದನು ಶಿವನಿಗೇ ಒಪ್ಪಿಸುತ್ತಾನೆ. ಶಿವನಿಗೆ ಕೋಪ ಬಂದು ತನ್ನ ಆದಿಗಣನಾಥನನ್ನು ಭೂಮಿಗೆ ಕಳುಹಿಸುತ್ತಾನೆ. ಆದಿಗಣನಾಥನು ಸೌರಾಷ್ಟ್ರದ ಪಾರದತ್ತ ಸೆಟ್ಟಿ-ಪುಣ್ಯವತಿಯರ ಮಗನಾಗಿ ಜನ್ಮ ತಾಳಿ ಆದಯ್ಯ ಎಂಬ ಹೆಸರಿನಿಂದ ಬೆಳೆಯುತ್ತಾನೆ.

ತರುಣ ಆದಯ್ಯ ವ್ಯಾಪಾರದ ಉದ್ದೇಶದಿಂದ ದಕ್ಷಿಣದ ಕಡೆ ಹೊರಟು ಪುಲಿಗೆರೆಗೆ ಬರುತ್ತಾನೆ. ಹಲವಾರು ಬಸದಿಗಳ ನಡುವೆ ಹೋಜೇಶ್ವರನಿಲಯವನ್ನು ಕಂಡು ಅಲ್ಲಿ ನಿಲ್ಲುತ್ತಾನೆ. ಒಂದು ರಾತ್ರಿ ಗೆಳೆಯರೊಡನೆ ಬೆಳದಿಂಗಳಿನಲ್ಲಿ ಬರುವಾಗ ಪದ್ಮಾವತಿ ಎಂಬುವಳನ್ನು ಕಂಡು ಮೋಹಗೊಳ್ಳುತ್ತಾನೆ. ಒಂದೆರಡು ತಿಂಗಳು ಅವಳ ಸಂಘ ಸುಖದಲ್ಲಿರುತ್ತಾನೆ. ಅನಂತರ ಅವಳು ಜೈನಳೆಂದು ತಿಳಿದು ಸಂತಾಪ ಪಡುತ್ತಾನೆ. ಪದ್ಮಾವತಿಯು ಶೈವ ದೀಕ್ಷೆಯನ್ನು ಪಡೆದುಕೊಳ್ಳುತ್ತಾಳೆ. ಅವಳ ತಂದೆಯು ವಿಧಿಯಿಲ್ಲದೆ ಅಳಿಯ ಮಗಳನ್ನು ಮನೆಯಲ್ಲಿಟ್ಟುಕೊಳ್ಳುತ್ತಾನೆ. ಒಮ್ಮೆ ಕಾರಣಾಂತರದಿಂದ ಮಾವ, ಅಳಿಯ ಇಬ್ಬರ ಮಧ್ಯೆ ಮನಸ್ತಾಪ ಹುಟ್ಟುತ್ತದೆ. ಸೋಮನಾಥನನ್ನು ತಂದು ಪುಲಿಗೆರೆಯ ಸುರಹೊನ್ನೆಯ ಮಹಾ ಬಸದಿಯೊಳಗೆ ಸ್ಥಾಪಿಸುತ್ತೇನೆಂದು ಪ್ರತಿಜ್ಞೆ ಮಾಡಿ ಹೋಗುತ್ತಾನೆ. ಆದಯ್ಯನು ತಾನು ಹೇಳಿದಂತೆ ಮಾಡಿದಾಗ ಜೈನರು ಕೋಪಗೊಳ್ಳುತ್ತಾರೆ. ಆದಯ್ಯ ತನ್ನ ಭಕ್ತಿಯ ಬಲದಿಂದ ಗೆಲ್ಲುತ್ತಾನೆ. ಜೈನರು ದೀಕ್ಷೆ ಪಡೆದು ವೀರಶೈವರಾಗುತ್ತಾರೆ. ಇದಿಷ್ಟು ಕಥೆಯ ಸ್ಥೂಲ ಸ್ವರೂಪ.

## 3.8 ಕೃತಿಯ ಪರಿಚಯ : ವೀರೇಶ ಚರಿತೆ

### 3.8.1 ಆಕರ

ಈ ಕಾವ್ಯದ ಕಥೆಯನ್ನು ಸ್ಕಾಂದಪುರಾಣ, ಶಿವಪುರಾಣ, ಲಿಂಗ ಪುರಾಣ, ಮುಂತಾದ ಗ್ರಂಥಗಳಲ್ಲಿ ಕಾಣಬಹುದು. ಹರಿಹರನ ವೀರಭದ್ರದೇವರ ರಗಳೆಯಲ್ಲಿಯೂ ಈ ಕಥೆಯಿದೆ. ರಾಘವಾಂಕನು ಹರಿಹರನ ರಗಳೆಯನ್ನು ಅನುಸರಿಸಿ ಕೆಲವು ಮಾರ್ಪಾಡುಗಳನ್ನು ಮಾಡಿಕೊಂಡಿದ್ದಾನೆ.

### 3.8.2 ಕಥಾವಸ್ತು

ಇಲ್ಲಿಯೂ ಕೂಡ ಕಥೆಯು ಕೈಲಾಸದಿಂದಲೇ ಪ್ರಾರಂಭವಾಗುತ್ತದೆ. ದಕ್ಷನು ಗರ್ವದಿಂದ ಶಿವನನ್ನು ಕಾಣಲು ಬರುತ್ತಾನೆ. ಅಳಿಯನಿಂದ ಸನ್ಮಾನಿತನಾಗಬೇಕೆಂಬ ಆಸೆಯು ಅವನಿಗಿತ್ತು. ಆದರೆ ಅಳಿಯನು ಮಾವನನ್ನು ಮನ್ನಿಸಲಿಲ್ಲ. ದಕ್ಷನು ಅಲ್ಲಿಂದ ತನ್ನ ಮಗಳ ಕಡೆಗೆ ಬರುತ್ತಾನೆ. ಪತಿವ್ರತಾ ಶಿರೋಮಣಿಯಾದ್ದರಿಂದ ಅವಳೂ ಕೂಡ ತನ್ನ ಪತಿಯ ಆಚರಣೆಯನ್ನೇ ಅನುಸರಿಸುತ್ತಾಳೆ. ಸಭಾಸದರು ಕೂಡ ಮೌನವಾಗಿರುತ್ತಾರೆ. ದಕ್ಷನು ಕೋಪ ಸಂತಾಪಗಳಿಂದ ಕುದಿದು ಹಿಂದಿರುಗುತ್ತಾನೆ. ಅಳಿಯನ ಸತ್ವವನ್ನು ಕಳೆಯಲು ಯಾಗವನ್ನು ಹಮ್ಮಿಕೊಳ್ಳುತ್ತಾನೆ. ದೇವತೆಗಳಾದಿಯಾಗಿ ಮುನಿಗಳೆಲ್ಲರೂ ಬರುತ್ತಾರೆ. ದಧೀಚಿಯೊಡನೆ ದಕ್ಷನು ವಾದವಿವಾದ ನಡೆಸುತ್ತಾನೆ. ದಾಕ್ಷಾಯಿಣಿಯು ತನ್ನ ತಂದೆಯ ಯಜ್ಞಕ್ಕೆ ಬಂದು ಅವಮಾನಿತಳಾಗಿ ಯಜ್ಞ ಕುಂಡಕ್ಕೆ ಬಿದ್ದು ದೇಹ ತೊರೆದು ಆತ್ಮ ರೂಪದಲ್ಲಿ ಶಿವನ ಬಳಿಗೆ ಬಂದು ದಕ್ಷನ ಉದ್ದೇಶವನ್ನು ತಿಳಿಸುತ್ತಾಳೆ. ಇದರಿಂದ ಕೋಪಗೊಂಡ ಶಿವನು ವೀರಭದ್ರನನ್ನು ಸೃಷ್ಟಿಸಿ ಯಜ್ಞವನ್ನು ಧ್ವಂಸಗೊಳಿಸುವಂತೆ ಕಳುಹಿಸುತ್ತಾನೆ. ವೀರಭದ್ರನು ಯಜ್ಞವನ್ನು ಅಲ್ಲೋಲ ಕಲ್ಲೋಲಗೊಳಿಸಿ, ದಕ್ಷನ ರುಂಡವನ್ನು ಕತ್ತರಿಸಿ ಆ ಜಾಗಕ್ಕೆ ಕುರಿಯ ತಲೆಯನ್ನು ಜೋಡಿಸಿ ಜೀವ ಕೊಡುತ್ತಾನೆ. ಇದಿಷ್ಟು ಈ ಕಾವ್ಯದ ಸಂಕ್ಷಿಪ್ತ ಕಥಾಭಾಗ, ವೀರಭದ್ರನ ಭಯಂಕರ ಕಾರ್ಯಾಚರಣೆಯನ್ನು ಕವಿಯು ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾನೆ.

## 3.9 ಭಾಷೆ, ಶೈಲಿ, ಕೃತಿ ಮಹತ್ವ

#### ಭಾಷೆ

ರಾಘವಾಂಕನ ಎಲ್ಲ ಕೃತಿಗಳೂ ವಾರ್ಧಕ ಷಟ್ಪದಿ ಛಂದಸ್ಸಿನಲ್ಲಿದೆ. ವೀರೇಶ ಚರಿತ್ರೆಯು ಮಾತ್ರ ವಾರ್ಧಕದ ಇನ್ನೊಂದು ರೂಪವೆನ್ನಿಸಿಕೊಳ್ಳುವ "ಉದ್ದಂಡ ಷಟ್ಪದಿ" ಛಂದಸ್ಸಿನಲ್ಲಿದೆ. ಷಟ್ಪದಿಗಳಿಗೆ ಒಗ್ಗುವ ಭಾಷೆ ನಡುಗನ್ನಡ. ರಾಘವಾಂಕನು ಉತ್ತಮವಾದ ರೀತಿಯಲ್ಲಿ ಶಬ್ದ ಸಂಯೋಜನೆ ಮಾಡಿದ್ದಾನೆ. ಉಪಮೆ, ದೃಷ್ಟಾಂತ, ರೂಪಕಗಳನ್ನು ಬಳಸಿದ್ದಾನೆ. ಗಾದೆಗಳನ್ನು, ನಾಣ್ಣುಡಿಗಳನ್ನು ಚಾಟುನುಡಿಗಳನ್ನೂ ಪ್ರಯೋಗಿಸಿದ್ದಾನೆ. ದೇಸಿಯ ಸೊಬಗನ್ನೂ ಕೂಡ ಇಲ್ಲಿ ಕಾಣಬಹುದಾಗಿದೆ.

#### ಶೈಲಿ

ಶೈಲಿ ಎನ್ನುವುದು ಒಂದೊಂದು ಕೃತಿಗೆ ಅನ್ವಯಿಸುವುದಿಲ್ಲ. ಅದು ಕವಿಗೆ ಸಂಬಂಧಿಸಿದ ವಿಷಯವಾಗಿದೆ. ಒಂದೊಂದು ಕಾವ್ಯ ಒಂದೊಂದು ಶೈಲಿಯಲ್ಲಿ ಇರುವುದು ಸಾಧ್ಯವಿಲ್ಲ. ರಾಘವಾಂಕನ ಶೈಲಿಯು ಮಾರ್ಗ ಕೃತಿಗಳ ಬಂಧವನ್ನೂ, ದೇಶೀಯ ಛಂದಸ್ಸಿನ ಸರಳತೆಯನ್ನೂ ಒಳಗೊಂಡಿದೆ. ಸ್ವಾತಂತ್ರ್ಯ ಪ್ರಿಯತೆ, ನಾಟಕೀಯತೆ ಧ್ವನಿರಮ್ಯತೆ ಇವು ಅವನ ಶೈಲಿಯ ಮುಖ್ಯ ಲಕ್ಷಣಗಳು. ನಾಟಕೀಯ ಶೈಲಿ ಉಳ್ಳವರು ತುಂಬಾ ಕಡಿಮೆ. ರಾಘವಾಂಕನ ಎಲ್ಲ ಕಾವ್ಯಗಳಲ್ಲಿ ನಾಟಕೀಯತೆಯನ್ನು ಕಾಣುತ್ತೇವೆ. ಹರಿಶ್ಚಂದ್ರ, ಗಾನರಾಣಿಯರು, ವಿಶ್ವಾಮಿತ್ರ-ಹರಿಶ್ಚಂದ್ರ, ದಕ್ಷ-ದಧೀಚಿ ಯಾರೇ ಆಗಿರಲಿ ಅವರ ಸಂವಾದದಲ್ಲಿ ನಾಟಕೀಯತೆ ಸ್ಪಷ್ಟವಾಗಿ ಕಂಡು ಬರುತ್ತದೆ. ಉಪಮಾದಿ ಅಲಂಕಾರಗಳೂ ಕೂಡ ಶೈಲಿಯ ಅಂಶವಾಗಿರುತ್ತದೆ. ಉದಾಹರಣೆಗೆ 'ಹಾವಗಿದು ಬಿಟ್ಟಂತೆ' 'ಸೀಗೆಯೊಳಗಣ ಬಾಳೆಗೆಣೆಯಾದುದು', 'ಕೊಂತವೆದೆಯಲಿ ಮೂಡಿದಂತೆ', ನಟ್ಟಕಲ್ಲೆನಿಸದಿಳೆಯೊಳಗೆ ಸುಳಿವ ಶಾಸನವೆನಿಸಿ', 'ಸತಿಗೆ ಸತಿ ಸೋಲ್ತು ಕೂಡಿದ ಕಾಲವುಂಟೆ', ಕೋಣನೆರಡುಂ ಹೋರೆ ಗಿಡುವಿಂಗೆ ಮಿತ್ತು'. ರಾಘವಾಂಕನು ತನ್ನದೇ ಆದ ಶೈಲಿಯನ್ನು ರೂಪಿಸಿಕೊಂಡಿರುವುದನ್ನು ಅವನ ಕಾವ್ಯಗಳ ಅಧ್ಯಯನದಿಂದ ತಿಳಿದುಕೊಳ್ಳಬಹುದು. ರಾಘವಾಂಕನ ಹತ್ತು ಪದ್ಯಗಳನ್ನು ಓದಿದನಂತರ ನೀವು ಯಾವುದಾದರೂ ವಾರ್ಧಕ ಷಟ್ಪದಿಯನ್ನು ಓದಿದಾಗ, ಇದು ಮೊದಲಿನ ಹತ್ತು ಪದ್ಯಗಳೊಡನೆ ಹೊಂದಿಕೊಳ್ಳುವಂತಿದೆ.

ಇದು ರಾಘವಾಂಕನ ಪದ್ಯವೇ ಇರಬಹುದು ಎಂದು ಭಾವಿಸುವುದಾದರೆ, ಆಗ ನಿಮಗೆ ಶೈಲಿಯನ್ನು ಗುರುತಿಸುವ ಅನುಭವ ಬಂದಿದೆ ಎಂದು ಕೊಳ್ಳಬಹುದು. ಏಕೆಂದರೆ ಒಬ್ಬ ಕವಿಯ ಪದ್ಯಗಳು ಸಮಾನ ಸತ್ವವನ್ನುಭಾಷೆಯಲ್ಲಿ, ಅಲಂಕಾರದಲ್ಲಿ,ಧ್ವನಿರಮ್ಯತೆಯಲ್ಲಿ, ಪದಪ್ರೈತ್ರಿಯಲ್ಲಿ, ಹೊಂದಿರುತ್ತವೆಂಬುದು ಸತ್ಯ ಸಂಗತಿಯೇ ಆಗಿದೆ.

## ಕೃತಿಗಳ ಮಹತ್ವ

### ಅ) ಹರಿಶ್ಚಂದ್ರ ಕಾವ್ಯ

ರಾಘವಾಂಕನ ಕೃತಿಗಳಲ್ಲಿ ಹಲವಾರು ವೈಶಿಷ್ಟ್ಯಗಳಿವೆ. ಹರಿಶ್ಚಂದ್ರ ಕಾವ್ಯವು 'ಹರನೆಂಬುದೇ ಸತ್ಯ, ಸತ್ಯವೆಂಬುದೆ ಹರನು' ಎಂಬ ಮಹಾ ವಾಕ್ಯದ ಸ್ಪಷ್ಟೀಕರಣಕ್ಕಾಗಿ ರಚಿತವಾಗಿದೆ. ಸತ್ಯವೇ ದೇವರು ಎಂದಾಗ ನೂರಾರು ಆಕಾರಗಳ ದೇವರುಗಳು ದೂರವಾಗುತ್ತಾರೆ. ಸತ್ಯಕ್ಕಿಂತಲೂ ದೊಡ್ಡ ದೇವರು ಯಾರು? ಆಧುನಿಕ ಜಗತ್ತಿಗೆ ಇಂತಹ ಮಾತು ತುಂಬಾ ಅಗತ್ಯವಾಗಿದೆ. ಇನ್ನು ಹೊಲೆತನದ ಪ್ರಶ್ನೆಯೂ ಕೂಡ ಪ್ರಸ್ತುತವಾದ ವಿಷಯ. ಯಾರು ಹೊಲೆಯೆಂಬುದಕ್ಕೆ ಕಾಲಕಾಲಕ್ಕೆ ಕವಿಗಳು ಹೊಸ ವ್ಯಾಖ್ಯಾನಗಳನ್ನು ಕೊಡುತ್ತಾ ಬಂದಿದ್ದಾರೆ. ರಾಘವಾಂಕನ ದರ್ಶನವು ಏನು ಹೇಳುತ್ತದೆ ನೋಡಿ. ವಿಶ್ವಾಮಿತ್ರನಿಗೆ ಕೋಪ ಬಂದಾಗ ಕವಿಯು ಒಂದು ಮಾತನ್ನು ಹೇಳುತ್ತಾನೆ. 'ಮುನಿಗೆ ಹೊಲೆಯಾವುದತಿ ಕೋಪ ಬದ್ಧ ದ್ವೇಷವನಿಮಿತ್ತ ವೈರ'. 'ಅತಿಹುಸಿವ ಯತಿ ಹೊಲೆಯ ಹುಸಿಯದಿಹ ಹೊಲೆಯನುನ್ನತ ಯತಿವರನು'. 'ಸುಳ್ಳು ಹೇಳದ ಹೊಲೆಯನು ಅತಿಶ್ರೇಷ್ಠ ಯತಿ' ಎಂದು ಕವಿಯು ಸಾರಿದ್ದಾನೆ.

### ಆ) ಸಿದ್ಧರಾಮ ಚಾರಿತ್ರ

ಸಿದ್ಧರಾಮ ಚಾರಿತ್ರವು ಒಂದು ಅಪೂರ್ವವಾದ ಕೃತಿ. ನಮ್ಮಲ್ಲಿ ಸನ್ಯಾಸಿಗಳು, ಯತಿಗಳು, ಮುಂತಾದವರು ದೈಹಿಕ ಶ್ರಮವನ್ನು ಮಾಡದ ವ್ಯಕ್ತಿಗಳಾಗಿದ್ದಾರೆ. ಕಾವಿ ಬಟ್ಟೆಯು ಅವರನ್ನು ಕಾಯಕದಿಂದ ದೂರಮಾಡಿದೆ. ಆದರೆ ಹಾಗೆ ಆಗಬೇಕಾದ ಪ್ರಮೇಯವಿಲ್ಲವೆಂದು ಈ ಕಾವ್ಯವು ಘಂಟಾಘೋಷವಾಗಿ ತಿಳಿಸುತ್ತದೆ. 'ಜನ ಬದುಕಲೆಂದತಿ ಕೃತಾರ್ಥತೆಯಿಂದೆ ನಿರಪೇಕ್ಷೆಯಿಂದೆ' ಕವಿಯು ಬರೆದಿದ್ದಾನೆ. ಸಿದ್ಧರಾಮನು ಶ್ರೀಶೈಲದಿಂದ ಸೊನ್ನಲಿಗೆಗೆ ಬಂದ ನಂತರ ಅವನ ಬದುಕು ಕರ್ಮಯೋಗಿಯ ಬದುಕಾಗುತ್ತದೆ. ಉಂಡು ಬೊಜ್ಜು ಬೆಳೆಸುವ ವೈಗಳ್ಳರ ಸಮೂಹಕ್ಕೆ ಸಿದ್ಧರಾಮನ ಮಾತು ಸಿಡಿಗುಂಡಾಗುತ್ತದೆ. ಜೀವರಾಶಿಗಳಿಗೆ ಕೆರೆ ಕಟ್ಟೆ ಬಾವಿಗಳನ್ನು ನಿರ್ಮಿಸುವುದು, ರಸ್ತೆಗಳ ನಿರ್ಮಾಣ ಮುಂತಾದವುಗಳನ್ನು ಸಿದ್ಧರಾಮ ಹಮ್ಮಿಕೊಳ್ಳುತ್ತಾನೆ. ಅವನು 'ಒಡ್ಡರ ಯಜಮಾನನೇ ಆಗುತ್ತಾನೆ.' 'ಶಿವಯೋಗಿಯ ಶರೀರಂ ವೃಥಾ ಸವೆಯಲಾಗದನುಗೊಂಬನಿತು ಕಾಯಕಂ ನಡೆಯುತಿರಬೇಕು' ಎಂಬುದು ಸಿದ್ಧರಾಮನ ಜೀವನ ಸೂತ್ರ.

### ಇ) ಸೋಮನಾಥ ಚಾರಿತ್ರ

ಈ ಕಾವ್ಯದಲ್ಲಿ ಮೇಲೆ ಹೇಳಲಾದ ಅಪರೂಪದ ಸಂದೇಶಗಳನ್ನು ಕಾಣಲಾಗದು. ಒಬ್ಬ ಭಕ್ತನ ಸಾಹಸ ಕಾರ್ಯವನ್ನು ಇಲ್ಲಿ ನೋಡಬಹುದು.

### ಈ) ವೀರೇಶ ಚರಿತೆ

ಇದೊಂದು ಚಿಕ್ಕ ಕಾವ್ಯ. ರಾಘವಾಂಕನ ನಾಟಕೀಯ ಪ್ರತಿಭೆಯನ್ನು ಇಲ್ಲಿಯೂ ನೋಡಬಹುದು. ಕವಿಯು ಕಥೆಯನ್ನು ಪ್ರಧಾನವಾಗಿ ತೆಗೆದುಕೊಂಡಿದ್ದಾನೆ. ದಾಕ್ಷಾಯಣಿಯ ತೀರ್ಮಾನಗಳು ಪಾತಿವ್ರತ್ಯದ ಹಿರಿಮೆಯನ್ನು ಎತ್ತಿ ಹಿಡಿಯುತ್ತವೆ. ತಪ್ಪು ಮಾಡಿದವರು ತಂದೆಯೇ

ಆದರೂ ಶಿಕ್ಷೆಗೆ ಗುರಿಯಾಗಬೇಕು ಎಂಬ ಧೋರಣೆ ಅವಳದು. ಛಂದಸ್ಸಿನ ದೃಷ್ಟಿಯಿಂದ ಯಾರೂ ಅನುಕರಿಸಲಾಗದುದರಿಂದ ಇದನ್ನು ಮೀಸಲು ಕವಿತೆ ಎಂದು ಕರೆಯಲಾಗಿದೆ.

**ಕೃತಿಗಳ ವಿಮರ್ಶೆ**

ಅ) ಹರಿಶ್ಚಂದ್ರ ಕಾವ್ಯವು ಲೋಕಸಾಧಾರಣ ಧರ್ಮವನ್ನು ಎತ್ತಿಹಿಡಿಯುವ ದಾರ್ಶನಿಕ ಕಾವ್ಯ. ಈ ಕಾವ್ಯದಲ್ಲಿ ದೋಷವನ್ನು ಹುಡುಕಿ ತೋರಿಸುವುದು ಅಸಾಧ್ಯವಾದುದು. ಎಲ್ಲಿಯಾದರೂ ವ್ಯಾಕರಣದ ಅಥವಾ ಛಂದಸ್ಸಿನ ಸಣ್ಣಪುಟ್ಟ ದೋಷವನ್ನು ಹುಡುಕಬಹುದೋ ಏನೋ.

ಆ) ಸಿದ್ಧರಾಮ ಚಾರಿತ್ರವು ಮೂರು ಹಂತಗಳಿಂದ ಕೂಡಿದೆ. ಸಿದ್ಧರಾಮನು ಶಿವದರ್ಶನವನ್ನು ಪಡೆದು ಸೊನ್ನಲಿಗೆಗೆ ಹಿಂದಿರುಗುವುದು, ಕಾಯಕದಲ್ಲಿ ಮಗ್ನನಾಗಿ ಅಲ್ಲಮನ ಭೇಟಿಯಾಗುವುದು, ಶಿವಯೋಗಿಯಾಗಿ ಜ್ಞಾನಪ್ರಧಾನವಾಗಿ ಬದುಕುತ್ತಾ ಸಮಾಧಿಸ್ಥನಾಗುವುದು. ಸಿದ್ಧರಾಮನ ಜೀವನದ ವಿಕಾಸಗತಿಯಲ್ಲಿ ಇವು ಪ್ರಮುಖ ಘಟ್ಟಗಳು. ಈ ಕಾವ್ಯದಲ್ಲಿಯೂ ಲೋಪದೋಷಗಳನ್ನು ಹುಡುಕಲು ಸಾಧ್ಯವಿಲ್ಲ. ಸ್ಪಷ್ಟವಾದ ಗುರಿಯನ್ನು ಇಟ್ಟುಕೊಂಡು ನೇರವಾಗಿ ನಡೆದ ಮಹಾಶರಣನ ಅನುಪಮ ಕಥನವನ್ನು ನಾವು ಇಲ್ಲಿ ನೋಡುತ್ತೇವೆ. ಸಿದ್ಧರಾಮನ ನಂಬಿಕೆಗೂ ರಾಘವಾಂಕನ ನಂಬಿಕೆಗೂ ಹೊಂದಾಣಿಕೆ ಇರುವಂತೆಯೂ ತೋರುತ್ತದೆ.

ಇ) ಸೋಮನಾಥ ಚಾರಿತ್ರವು ಮೇಲಿನ ಎರಡು ಗ್ರಂಥಗಳಿಗಿಂತ ಭಿನ್ನವಾದ ಗತಿಯನ್ನು, ಧೋರಣೆಯನ್ನು ಹೊಂದಿದೆ. ರಾಘವಾಂಕನ ಸ್ವಭಾವಕ್ಕೆ ಭಿನ್ನವಾದ ರೀತಿಯಲ್ಲಿ ಕಾವ್ಯ ಬೆಳೆದಿದೆ. ಕಥೆಯಲ್ಲಿ ಏಕ ಸೂತ್ರತೆಯೂ ಕಂಡು ಬರುವುದಿಲ್ಲ. ಆದಯ್ಯನು ಮೊದಲನೆ ಹೆಂಡತಿಯ ವಿಷಯವನ್ನು ಪ್ರಸ್ತಾಪಿಸುವುದಿಲ್ಲ. ವಿವಾಹಿತನಾಗಿಯೂ ಪದ್ಮಾವತಿಯಲ್ಲಿ ಮೋಹಗೊಳ್ಳುವುದು ಅಸಮರ್ಥನೀಯವಾದುದು. ಅಲ್ಲದೆ ಯಾರಿಗೂ ತಿಳಿಯದಂತೆ ಗುಟ್ಟಾಗಿ ರತಿ ಸುಖವನ್ನು ಅನುಭವಿಸುತ್ತಿದ್ದರೆಂದು ಬರೆಯುವುದು ಅವಾಸ್ತವವೂ ಅನೈತಿಕವೂ ಆದುದು. ಹೊಸ ಮಾವನ ತಪ್ಪೇನೂ ಇಲ್ಲದಿದ್ದರೂ ಅದರಲ್ಲಿ ತಪ್ಪು ಹುಡುಕಿ ಅನಗತ್ಯವಾಗಿ ಜಗಳ ತೆಗೆಯುವುದು ಅನುಚಿತವೆನಿಸುತ್ತದೆ. ವರ್ಣನೆಗಳ ವಿಷಯದಲ್ಲಿಯೂ ಸಂಪ್ರದಾಯಕ್ಕೆ ತಲೆ ಬಾಗಿದ್ದಾನೆ. ಇದರಲ್ಲಿ ಕಾವ್ಯಾಂಶವೂ ಕಡಿಮೆ. ಕಲಾತ್ಮಕ ಅಂಶವೂ ಕಡಿಮೆ, ತಾರ್ಕಿಕ ಬೆಳವಣಿಗೆಯ ಕ್ರಮವೂ ಕಂಡುಬರುವುದಿಲ್ಲ. ಇದು ರಾಘವಾಂಕನ ಮೊಟ್ಟಮೊದಲನೆಯ ಕೃತಿಯಾಗಿರಬಹುದೆ ಎಂಬ ಸಂದೇಹವೂ ಹುಟ್ಟುತ್ತದೆ.

ಈ) ವೀರೇಶ ಚರಿತೆಯ ಮುಖ್ಯ ಉದ್ದೇಶವೇ ಶಿವಪಾರಮ್ಯವನ್ನು ಸಾರುವುದು. ಪಾತ್ರ ಚಿತ್ರಣದ ವಿಷಯದಲ್ಲಿ ಕವಿಯು ಯಶಸ್ವಿಯಾಗಿದ್ದಾನೆ. ಆಯಾ ಪಾತ್ರಗಳ ಸ್ವಭಾವವನ್ನು ಅರ್ಥಮಾಡಿಕೊಂಡು ಅವರಿಗೆ ಒಪ್ಪುವ ರೀತಿಯ ಚಟುವಟಿಕೆಗಳಲ್ಲಿ ಆಲೋಚನೆಗಳಲ್ಲಿ ತೊಡಗಿಸುತ್ತಾನೆ. ದಾಕ್ಷಾಯಣಿಯ ಪಾತ್ರ ಚಿತ್ರಣವು ಸಹಜ ಸುಂದರವಾಗಿದೆ. ತಂದೆ ಮತ್ತು ಮಗಳ ವ್ಯಕ್ತಿತ್ವಗಳ ವೈರುಧ್ಯವನ್ನು ಕವಿಯು ಚೆನ್ನಾಗಿ ಅರ್ಥಮಾಡಿಕೊಂಡು ಬರೆದಿದ್ದಾನೆ. ಆವೇಶ, ಆರ್ಭಟಗಳ ಪ್ರವಾಹವನ್ನು ನಿಯಂತ್ರಿಸಿ, ಗತಿಯನ್ನು ನಿರ್ದೇಶಿಸಿದ್ದರೆ ಇನ್ನೂ ಒಳ್ಳೆಯ ಪ್ರಭಾವವನ್ನು ಬೀರಬಹುದಾಗಿತ್ತು ರಾಘವಾಂಕನು ಶಿವನನ್ನು ಬಿಟ್ಟು ಇತರ ದೇವರುಗಳನ್ನು ಇಲ್ಲಿ ಕೊಂಚ ತಾತ್ಸಾರದಿಂದ ಕಂಡಿದ್ದಾನೆ. ಹರಿಶ್ಚಂದ್ರ ಕಾವ್ಯದ ಕವಿ ಹೀಗೆ ಏಕೆ ಮಾಡಿದ ಎಂಬ ಸಂದೇಹ ಹುಟ್ಟುತ್ತದೆ. ಕಾವ್ಯದ ಮಹತ್ವ ಇಂತಹ ಮಾತುಗಳಿಂದ ತಗ್ಗಿ ಬಿಡುತ್ತದೆ.

## 3.10. ಸ್ವಪರೀಕ್ಷಾ ಪ್ರಶ್ನೆಗಳು

1. 'ಷಟ್ಪದಿ' ಯಾವಾಗ ಪ್ರಯೋಗಕ್ಕೆ ಬಂತು?

......................................................................................................

......................................................................................................

......................................................................................................

2. 'ಷಟ್ಪದಿ ' ಯನ್ನು ಮೊದಲಿಗೆ ಹೆಸರಿಸಿದವರು ಯಾರು?

......................................................................................................

......................................................................................................

......................................................................................................

3. ಮಾತ್ರಾಷಟ್ಪದಿಯಲ್ಲಿ ಎಷ್ಟು ವಿಧಗಳು?

......................................................................................................

......................................................................................................

......................................................................................................

4. ಮೂಲ ಷಟ್ಪದಿಯನ್ನು ಪುನರ್ರಚನೆ ಮಾಡಿದವರು ಯಾರು?

......................................................................................................

......................................................................................................

......................................................................................................

## 3.11 ಅಭ್ಯಾಸ ಪ್ರಶ್ನೆಗಳು

1. ರಾಘವಾಂಕನ ಕಾಲ ಯಾವುದು?
2. ರಾಘವಾಂಕನು ಎಷ್ಟು ಕೃತಿಗಳನ್ನು ರಚಿಸಿದ್ದಾನೆ ?ಅವು ಯಾವುವು?
3. ಹರಿಶ್ಚಂದ್ರ ಕಾವ್ಯದಲ್ಲಿ ಸತ್ಯವನ್ನು ಯಾರಿಗೆ ಹೋಲಿಸಲಾಗಿದೆ ?
4. ವಿಶ್ವಾಮಿತ್ರನು ಎಂತಹ ವ್ಯಕ್ತಿಯಾಗಿ ಕಾಣಿಸುತ್ತಾನೆ ?
5. ವೀರಬಾಹುವಿನ ಯಾವ ಪ್ರಶ್ನೆಯಿಂದ ಹರಿಶ್ಚಂದ್ರನು ಆತ್ಮ ಪರೀಕ್ಷೆ ಮಾಡಿಕೊಳ್ಳಬೇಕಾಯಿತು?
6. ಸಿದ್ಧರಾಮನ ಕಾರ್ಯಕ್ಷೇತ್ರ ಯಾವುದು, ಈಗ ಅದರ ಹೆಸರೇನು ?
7. ಕಾಯಕ ಎಂದರೇನು ?ಅದರ ಮಹತ್ವವೇನು ?
8. ಸೋಮನಾಥ ಚಾರಿತ್ರದ ನಾಯಕನಾರು ? ಆತನ ಸಾಧನೆ ಏನು?
9. ದಕ್ಷನು ಶಿವನನ್ನು ದ್ವೇಷಿಸಲು ಕಾರಣವೇನು ?
10. ರಾಘವಾಂಕನ ಕೃತಿಗಳಲ್ಲಿ ಯಾವುದು ಅತ್ಯುತ್ತಮ ?ಏಕೆ?

## 3.12 ಸಾರಾಂಶ

ಕನ್ನಡ ಸಾಹಿತ್ಯವನ್ನು ಛಂದಸ್ಸಿನ ಪ್ರಯೋಗದ ದೃಷ್ಟಿಯಿಂದ ಅಧ್ಯಯನ ಮಾಡುವುದರಿಂದ ಬಹಳ ಮಹತ್ವದ ಅಂಶಗಳು ಕಂಡು ಬರುತ್ತವೆ. ಭಕ್ತಿ ಪಂಥ ಕರ್ನಾಟಕದಲ್ಲಿ ಜನಪ್ರಿಯವಾದ ಹಂತದಲ್ಲಿಕೀರ್ತನೆ, ಭಜನೆ, ಜನಪ್ರಿಯವಾದ ಕಾಲದಲ್ಲಿ ಕಾವ್ಯದ ಲಯಗಾರಿಕೆಯು ಮೇಲೆ, ಕವಿಗಳ ಮೂಲಭೂತ ಚಿಂತನೆಯ ಮೇಲೆ ಮಹತ್ವದ ಪರಿಣಾಮ ಮಾಡಿದ್ದನ್ನು ಅಲ್ಲಗಳೆಯುವಂತಿಲ್ಲ. ಹಾಗಾಗಿ ಕನ್ನಡದ ಶ್ರೇಷ್ಠ ದರ್ಜೆಯ ಕವಿಗಳು ಸಂಸ್ಕೃತದ ಮಟ್ಟುಗಳನ್ನು ಬಿಟ್ಟು, ಅಚ್ಚಗನ್ನಡದ ಮಟ್ಟಿನತ್ತ ತಿರುಗಿದ್ದು, ಅದನ್ನು ಯಶಸ್ವಿಯಾಗಿ ಪ್ರಯೋಗಿಸಿದ್ದು ಕನ್ನಡ ಸಾಹಿತ್ಯದ ಬೆಳವಣಿಗೆಯ ಹಂತದಲ್ಲಿ ಗಮನಿಸಲೇಬೇಕಾದ ಅಂಶವಾಗುತ್ತದೆ.

## ಸಂಚಿಕೆ - 2
## ಕನ್ನಡ ಸಾಹಿತ್ಯ ಚರಿತ್ರೆ - ನಡುಗನ್ನಡ ಸಾಹಿತ್ಯ

---

## ಘಟಕ - 4
## ಷಟ್ಪದಿ ಕವಿಗಳು : ಕುಮಾರವ್ಯಾಸ, ಚಾಮರಸ, ಕುಮಾರವಾಲ್ಮೀಕಿ

---

ಪರಿವಿಡಿ :

4.0 ಉದ್ದೇಶ

4.1 ಪೀಠಿಕೆ

4.2 ಕುಮಾರವ್ಯಾಸ

4.2.1 ದೇಶ

4.2.2 ಕೃತಿಗಳು

4.2.3 'ಕರ್ಣಾಟ ಭಾರತ ಕಥಾ ಮಂಜರಿ' ಕೃತಿ ಪರಿಚಯ

4.2.3.1 ಆಕರ

4.2.3.2 ಕಥಾವಸ್ತು

4.2.3.3 ಪಾತ್ರಗಳು : ಕೃಷ್ಣ, ದುರ್ಯೋಧನ, ಕರ್ಣ

4.2.4 ಪ್ರಸಂಗಗಳು :

4.2.4.1 ದ್ರೌಪದೀ ಸ್ವಯಂವರ

4.2.4.2 ದ್ಯೂತ ಮತ್ತು ವಸ್ತ್ರಾಪಹರಣ

4.2.4.3 ಉತ್ತರನ ಪ್ರಸಂಗ

4.2.5 ಕೃತಿ ಭಾಷೆ ಶೈಲಿ

4.2.6 ಕೃತಿಯ ಮಹತ್ವ

4.3 ಚಾಮರಸ

4.3.1 ದೇಶ

4.3.2 ಕೃತಿಗಳು

4.3.3 ಆಕರ

4.3.4 ಕಥಾವಸ್ತು

4.3.5 ಪಾತ್ರಗಳು : ಅಲ್ಲಮ, ಮಾಯೆ, ಸಿದ್ಧರಾಮ, ಬಸವಣ್ಣ

4.3.6 ಪ್ರಸಂಗಗಳು : ಮಾಯಾಕೋಲಾಹಲ ಪ್ರಸಂಗ,
ಅಲ್ಲಮ ಸಿದ್ಧರಾಮನನ್ನು ಭೇಟಿಯಾದ ಸಂದರ್ಭ

## 4.0 ಉದ್ದೇಶ

- ಸಾಹಿತ್ಯದ ಬೆಳವಣಿಗೆಯನ್ನು ಗುರುತಿಸುವುದು
- ಕವಿಯ ಕಾಲ, ದೇಶ ತಿಳಿಯುವುದು
- ಕವಿಯ ಜೀವಿತದ ಸಂದರ್ಭದಲ್ಲಿ ಆದ ಪರಿಣಾಮಗಳನ್ನು ಗುರುತಿಸುವುದು
- ಕವಿಯ ಧೋರಣೆಯನ್ನು ವಿಶ್ಲೇಷಿಸುವುದು
- ಕವಿಯ ಕಾವ್ಯ ಪ್ರವೃತ್ತಿ ಬಗ್ಗೆ ಚರ್ಚಿಸುವುದು.

## 4.1 ಪೀಠಿಕೆ

ಕನ್ನಡ ಸಾಹಿತ್ಯವನ್ನು ಆರಂಭದಿಂದ ಅಧ್ಯಯನ ಮಾಡಿಕೊಂಡು ಬಂದಾಗ ನಮ್ಮ ಭಾಷೆ, ಛಂದಸ್ಸು, ಮೀಮಾಂಸೆಗಳು ಹೇಗೆ ಕ್ರಮೇಣ ವಿಕಾಸಗೊಂಡವು, ತನ್ಮೂಲಕ ಭಾಷೆಯನ್ನು ಸಾಹಿತ್ಯದ ಹದಕ್ಕೆ ಹುರಿಗೊಳಿಸಿಕೊಂಡರು ಎಂಬ ಮಹತ್ವದ ಅಂಶ ಮನದಟ್ಟಾಗುತ್ತದೆ. ಕನ್ನಡ ಸಾಹಿತ್ಯ ರಚನೆಯ ಸಂದರ್ಭದಲ್ಲಿ ವೈವಿಧ್ಯಮಯ ಸಾಹಿತ್ಯ ಹೊರ ಬರಲು ಸಾಹಿತಿಗಳು, ಕವಿಗಳು ತಮ್ಮನ್ನು ತೊಡಗಿಸಿಕೊಂಡದ್ದು ಅಧ್ಯಯನದ ದೃಷ್ಟಿಯಿಂದ ತೀರ ಮಹತ್ವದ ವಿಚಾರವಾಗುತ್ತದೆ. ಪದ್ಯ, ಗದ್ಯ ಹೀಗೆ ಹಲವು ಬಗೆಯ ಸಾಹಿತ್ಯ ಪ್ರಕಾರಗಳಲ್ಲಿ ಏಕ ಪ್ರಕಾರವಾಗಿ ತಮ್ಮ ಅನುಭವಗಳನ್ನು ಧ್ಯೇಯೋದ್ದೇಶಗಳನ್ನು, ಆನಂದಾನುಭೂತಿಯನ್ನು ಕಾಣ್ಕೆಯನ್ನು ಭಾಷೆಯ ಮೂಲಕ ಅಭಿವ್ಯಕ್ತಿಸಿದ ಕಥನವೇ ಸಾಹಿತ್ಯ ಚರಿತ್ರೆಯಾಗುತ್ತದೆ.

## 4.2 ಕುಮಾರವ್ಯಾಸ

'ಕುಮಾರವ್ಯಾಸ' ಎಂಬುದು ಈ ಹೆಸರಿನಿಂದ ನಾವಿಂದು ಗುರುತಿಸುವ ಕವಿಯ ನಿಜ ನಾಮವೋ, ಕಾವ್ಯನಾಮವೋ ಎಂಬ ಬಗೆಗೆ ಸಾಕಷ್ಟು ವಾದ ಪ್ರತಿವಾದಗಳು ನಡೆದಿವೆ. ಕವಿ ತನ್ನ ಸ್ವಂತ ವಿಚಾರಗಳನ್ನು ತನ್ನ ಕೃತಿಯಲ್ಲೆಲ್ಲಿಯೂ ಹೇಳಿಕೊಳ್ಳದಿರುವುದು ಅವನ ಕಾಲ, ದೇಶ, ಮತ ಮೊದಲಾದ ವಿಚಾರಗಳಂತೆ ಹೆಸರಿನ ವಿಚಾರದಲ್ಲಿಯೂ ಚರ್ಚೆಗೆ ಎಡೆಮಾಡಿಕೊಟ್ಟಿದೆ. ಕವಿಯ ಹೆಸರನ್ನು ಕುರಿತು ಚರ್ಚೆ ಮಾಡಿದವರು ಕುಮಾರವ್ಯಾಸ ಎಂಬುದು ಕವಿಯ ನಿಜ ನಾಮಧೇಯ ಎಂದೂ, ಸನ್ಯಾಸಾಶ್ರಮದ ಹೆಸರೆಂದೂ, ವ್ಯಾಸರ ಮೇಲಿನ ಪೂಜ್ಯ ಭಾವನೆಯಿಂದಲೋ ಅಭಿಮಾನದಿಂದಲೋ ಕವಿ ತಾನೇ ಇಟ್ಟುಕೊಂಡ ಹೆಸರೆಂದೂ, ಬಿರುದಾಗಿರಬೇಕೆಂದೂ, ಕವಿಯ ನಿಜನಾಮ ನಾರಣಪ್ಪ ಅಥವಾ ನಾರಾಯಣಪ್ಪ ಇಲ್ಲವೇ ವೀರ ನಾರಾಯಣಪ್ಪ ಎಂದೂ ವಾದ ಮಾಡಿದ್ದಾರೆ. ನಾರಾಯಣಪ್ಪ ಅಥವಾ ವೀರನಾರಾಯಣಪ್ಪ ಎಂಬ ಹೆಸರನ್ನು ಕವಿ ತನ್ನ ಕೃತಿಯಲ್ಲಿ ಎಲ್ಲಿಯೂ ಹೇಳಿಲ್ಲ. ಅನಂತರದ ಕವಿಗಳಲ್ಲಿ ಕೆಲವರು ಕವಿಯನ್ನು ಸ್ಮರಿಸುವಾಗ 'ಕುಮಾರವ್ಯಾಸ' ಎಂದೇ ಹೇಳಿದ್ದಾರೆ. ಹೀಗೆ ಹೇಳಿರುವುದು ಕವಿಯ ಪ್ರಚಲಿತ ಹೆಸರನ್ನು ಸೂಚಿಸುತ್ತಿರಬಹುದು. ಅದೇ ಅವನ ನಿಜವಾದ ಹೆಸರಾಗಿತ್ತೆಂದು ಇಷ್ಟರಿಂದಲೇ ಹೇಳಲು ಬರುವುದಿಲ್ಲ. ಗದುಗಿನ ವೀರನಾರಾಯಣಸ್ವಾಮಿ ದೇವಾಲಯದ ಶಾಸನದಲ್ಲಿ 'ಕುಮಾರವ್ಯಾಸ' ಎಂದಿರುವುದರ ಬಗೆಗೂ ಇದೇ ಮಾತನ್ನು ಹೇಳಬಹುದು. ಕವಿ ಗದುಗಿನ ವೀರನಾರಾಯಣನ ಭಕ್ತನಾಗಿದ್ದನೆಂಬುದರಿಂದಲೂ, ಕವಿಯ ವಂಶಸ್ಥರಿಗೆ ಸೇರಿದುವು ಎನ್ನಲಾದ ಕೋಳಿವಾಡದ ಕಾಗದ ಪತ್ರಗಳಲ್ಲಿ ಉಲ್ಲೇಖವಾಗಿರುವುದರಿಂದಲೂ ನಾರಣಪ್ಪ ಅಥವಾ ನಾರಾಯಣಪ್ಪ ಅಥವಾ ವೀರನಾರಾಯಣಪ್ಪ ಎಂಬ ಹೆಸರು ಕವಿಗೆ ಥಳಕು ಹಾಕಿಕೊಂಡಿರುವಂತೆ ಕಾಣುತ್ತದೆ. ಕೋಳಿವಾಡದ ಕಾಗದ ಪತ್ರಗಳ ನೈಜತೆಯ ಬಗೆಗೆ ವಿದ್ವಾಂಸರಲ್ಲಿ ಏಕಾಭಿಪ್ರಾಯವಿಲ್ಲ. ಖಚಿತ ಆಧಾರಗಳ

ಅಭಾವದಿಂದಾಗಿ ಇವುಗಳಲ್ಲಿ ಯಾವುದೇ ಒಂದು ಕವಿಯ ನಿಜವಾದ ಹೆಸರೆಂದು ನಿರ್ಣಯಿಸುವಂತಿಲ್ಲ. ಕವಿ ತನ್ನ ಕೃತಿಯ ಅನೇಕ ಕಡೆ ತನ್ನನ್ನು 'ಕುಮಾರವ್ಯಾಸ' ಎಂದು ಕರೆದುಕೊಂಡಿದ್ದಾನೆ. ವ್ಯಾಸರ ಮೇಲಿನ ತನ್ನ ಉಪಕೃತಿಗಾಗಿಯೂ ವಿನೀತ ಭಾವಕ್ಕಾಗಿಯೂ ಹಾಗೆ ಕರೆದುಕೊಳ್ಳುವುದೇ ಅವನಿಗೆ ಪ್ರಿಯವಾಗಿರುವಂತೆ ಕಾಣುತ್ತದೆ. ಅಂತಲೇ ಈ ಹೆಸರಿನಿಂದಲೇ ಅವನನ್ನು ಗುರುತಿಸುವುದು ಹೆಚ್ಚು ರೂಢವಾಗಿದೆ.

ಕುಮಾರವ್ಯಾಸನ ಮತವಿಚಾರದ ಬಗೆಗೆ ಇಲ್ಲಿ ಹೆಚ್ಚು ಅವಕಾಶವೀಯಬೇಕಾದ ಅಗತ್ಯವಿಲ್ಲ. ಈಗಾಗಲೇ ವಿದ್ವಾಂಸರಲ್ಲಿ ಈ ಬಗೆಗೆ ಸಾಕಷ್ಟು ಚರ್ಚೆ ನಡೆದು ತೀರ್ಮಾನಕ್ಕೂ ಬರಲಾಗದೆ ಚರ್ಚೆಗೆ ನಿಲುಗಡೆ ಹೇಳಲಾಗಿದೆ. ಕೃತಿಯ ಆಂತರಿಕ ಸಾಕ್ಷ್ಯಗಳು, ಶಾಸನ ಸಾಕ್ಷ್ಯಗಳು ಹಾಗೂ ಇನ್ನಿತರ ಸಾಕ್ಷ್ಯಗಳನ್ನು ಆಧರಿಸಿ ಚರ್ಚೆ ನಡೆಸಿದವರು ಕವಿ ಬ್ರಾಹ್ಮಣನೆಂಬುದನ್ನು ಎರಡು ಮಾತಿಲ್ಲದೆ ಒಪ್ಪಿದ್ದಾರೆ. ಬ್ರಾಹ್ಮಣರಲ್ಲಿ ಯಾವ ಪಂಗಡಕ್ಕೆ ಸೇರಿದವನೆಂಬುದರಲ್ಲಿ ಚರ್ಚೆ ಅನಗತ್ಯವೆಂಬ ಮಟ್ಟಕ್ಕೆ ಹೋಗಿರುವುದೂ ಉಂಟು. ಹರಿಪ್ರಶಂಸೆ, ಹರಿಪಾರಮ್ಯಗಳು ಕೃತಿಯಲ್ಲಿರುವಂತೆ ಹರಿ-ಹರನ ಬಗೆಗೆ ಸಮಭಾವದ ಭಕ್ತಿಯೂ ಕೃತಿಯಲ್ಲಿರುವುದರಿಂದ ಹರಿಹರರಲ್ಲಿ ಭೇದವೆಣಿಸದ ಭಾಗವತ ಸಂಪ್ರದಾಯದವನಿರಬೇಕೆಂದು ಭಾವಿಸಲಾಗಿದೆ. ಕವಿಯ ಮೇಲೆ ಸ್ಮಾರ್ತಭಾಗವತ ಸಂಪ್ರದಾಯದ ಪ್ರಭಾವ ಹೆಚ್ಚಾಗಿದ್ದರೂ, ಭಾಗವತದಲ್ಲಿ ಯಾವ ಪಂಗಡಕ್ಕೆ ಸೇರಿದ್ದಾನೆ ಎಂದು ನಿರ್ಧರಿಸುವುದು ಕಷ್ಟವಾದ ಕೆಲಸ ಎಂಬ ತೀರ್ಮಾನಕ್ಕೆ ಬರಲಾಗಿದೆ.

ಚಾರಿತ್ರಿಕ ಅಧ್ಯಯನದ ದೃಷ್ಟಿಯಿಂದ ಆತನ ಕಾಲ ಮತ್ತು ದೇಶಗಳ ವಿಚಾರವಾಗಿ ತಿಳಿಯಬೇಕಾದುದು ಅವಶ್ಯಕ. ಆ ಬಗ್ಗೆ ಈಗ ಗಮನ ಹರಿಸೋಣ.

ಕುಮಾರವ್ಯಾಸ ತನ್ನ ಕೃತಿಯಲ್ಲಿ ಜನ್ಮ ದಿನಾಂಕವನ್ನಾಗಲಿ, ಕೃತಿ ರಚನೆಯ ಕಾಲವನ್ನಾಗಲಿ ತಿಳಿಸಿಲ್ಲ. ಆದ್ದರಿಂದ ಬೇರೆ ಬೇರೆ ಪ್ರಮಾಣಗಳನ್ನಾಧರಿಸಿ ಕುಮಾರವ್ಯಾಸನ ಕಾಲವನ್ನು ಗೊತ್ತುಪಡಿಸುವ ಪ್ರಯತ್ನವನ್ನು ವಿದ್ವಾಂಸರು ಮಾಡಿದ್ದಾರೆ. ಅವರ ವಿಚಾರ ಮಂಥನಕ್ಕೆ ಸಹಾಯಕವಾದ ಪ್ರಮಾಣಗಳು ಹೀಗಿವೆ :-

1. ಪೂರ್ವಕವಿ ಕೃತಿಗಳ ಅನುಸರಣೆ ಮತ್ತು ಉತ್ತರ ಕಾಲೀನ ಕವಿಕೃತಿಗಳ ಮೇಲೆ ಪ್ರಭಾವ
2. ಶಾಸನ ಸಾಕ್ಷ್ಯಗಳು
3. ವೀರಶೈವ ಗ್ರಂಥಗಳಲ್ಲಿ ಬಂದಿರುವ ಕವಿಯ ಚರಿತ್ರೆ
4. ಗ್ರಂಥದ ಆಂತರಿಕ ಸಾಕ್ಷ್ಯಗಳು
5. ಗ್ರಂಥದ ಭಾಷೆ ಶೈಲಿಗಳು

ವೇದವ್ಯಾಸರ ಹೊರತು ಬೇರಾವ ಸಂಸ್ಕೃತ ಕನ್ನಡ ಕವಿಗಳನ್ನು ಕುಮಾರವ್ಯಾಸ ಸ್ಮರಿಸಿಲ್ಲ. ಆದ್ದರಿಂದ ಅವನ ಪೂರ್ವಕವಿಗಳ ಅನುಸರಣೆಯ ವಿಧಾನವನ್ನು ಗುರುತಿಸುವುದು ದುಸ್ತರವಾದ ಸಂಗತಿಯಾಗಿದೆ. ಆದರೂ ಈ ನಿಟ್ಟಿನಲ್ಲಿ ವಿದ್ವಾಂಸರು ಮಾಡಿದ ಪ್ರಯತ್ನಗಳಿಂದ ಕುಮಾರವ್ಯಾವಸನ ಮೇಲೆ ಪಂಪನ ಪ್ರಭಾವವಿರುವುದು ದೃಢಪಟ್ಟು ಪಂಪನ ಕಾಲವನ್ನು ಕುಮಾರವ್ಯಾಸನಕಾಲ ನಿರ್ಣಯದ ಪೂರ್ವದ ಗಡುವನ್ನಾಗಿ ಪರಿಗಣಿಸಲಾಗಿತ್ತು. ಕೃತಿಯ ಆಂತರಿಕ ಸಾಕ್ಷಿಗಳ ವಿಶ್ಲೇಷಣೆಯಿಂದ ಕುಮಾರ ವ್ಯಾಸನ ಕೃತಿಯಲ್ಲಿ ಹೊಯ್ಸಳ - ಸೇವುಣರ ಕಾಲದಿಂದ ಈಚಿನವನೆಂದು ಪರಿಗಣಿಸಿ ಈ ಗಡುವನ್ನು ಸುಮಾರು ೧೩೩೦-೪೦ ಕ್ಕೆ ತಂದು ನಿಲ್ಲಿಸಲಾಗಿದೆ. ಉತ್ತರಕಾಲೀನ ಕವಿಗಳ ಮೇಲೆ ಕುಮಾರವ್ಯಾಸನ ಪ್ರಭಾವ ಹಾಗೂ ಅವನನ್ನು ಸ್ಮರಿಸಿದ ಉತ್ತರಕಾಲೀನ ಕವಿಗಳ ವಿಚಾರಕ್ಕೆ ಬಂದಾಗ ತಿಮ್ಮಣ್ಣ ಕವಿ, ಭಾಸ್ಕರ, ಕುಮಾರ ವಾಲ್ಮೀಕಿ, ವ್ಯಾಸರಾಯ, ಪುರಂದರದಾಸ-ಇವರು ಮುಖ್ಯರಾಗಿ ಪರಿಗಣಿಸಲ್ಪಡುತ್ತಾರೆ.

ಇವರಲ್ಲಿಯೂ 'ಜೀವಂಧರ ಚರಿತೆ'ಯ ಕರ್ತೃ ಭಾಸ್ಕರ (೧೪೨೫) ವಿಪುಲವಾದ ಚರ್ಚೆಗೆ ಗುರಿಯಾಗಿ ಕುಮಾರವ್ಯಾಸನ ಕಾಲ ನಿರ್ಣಯದ ಉತ್ತರದ ಗಡುವಾಗಿ ಪರಿಣಮಿಸಿದ್ದಾನೆ. ಮೇಲಿನ ಶಾಸನ ಸಾಕ್ಷ್ಯಗಳಲ್ಲಿ ಗದುಗಿನ ವೀರನಾರಾಯಣಸ್ವಾಮಿ ದೇವಾಲಯದ ಗೋಡೆಯ ಮೇಲಿನ ಶಾಸನ(೧೫೫೯). ಕೋಳಿವಾಡದ ಮಾಧವಜನಾರ್ಧನ ದೇವಾಲಯದ ಗೋಡೆಯ ಮೇಲಿನ ಶಾಸನ (೧೫೫೮), ಹಾವೇರಿಯ ಸಂಗೂರು ಶಿಲಾಶಾಸನ (೧೪೦೭)ಗಳನ್ನು ಪರಿಗಣಿಸಲಾಗಿದೆ. ಕುಮಾರವ್ಯಾಸನೊಡನೆ ಕೆಲವು ಶೈವಕವಿಗಳ ಸಂಬಂಧ ಕಲ್ಪನೆ ಮಾಡಿ ಕಥೆ ಹೇಳುವ ವೀರಶೈವ ಗ್ರಂಥಗಳೆಂದರೆ ಅದೃಶ್ಯಕವಿಯ 'ಪ್ರೌಢರಾಯನ ಕಾವ್ಯ' ಸಿದ್ಧನಂಜೇಶನ 'ಗುರುರಾಜ ಚಾರಿತ್ರ' 'ರಾಘವಾಂಕ ಚಾರಿತ್ರ' ಶಾಂತಲಿಂಗ ದೇಶಿಕನ 'ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರ', ಶಂಕರ ಕವಿಯ 'ಚೋರಬಸವನ ಚರಿತೆ', 'ಅನುಭವ ಶಿಖಾಮಣಿ' ಕುಮಾರವ್ಯಾಸನಿಗೆ ಗದುಗಿನ ನಾರಾಯಣ ಅನುಗ್ರಹ ದೊರೆತ ಕಥೆಯನ್ನು ಹೇಳುತ್ತವೆ. ಕೃತಿಯಲ್ಲಿ ಉಕ್ತರಾದ ಕವಿಗಳ ಸಮಕಾಲೀನತೆಯಾಗಲಿ, ಸಂಬಂಧಕಲ್ಪನೆಯಯಾಗಲಿ, ಕಟ್ಟು ಕಥೆಯಾಗಿರುವುದರಿಂದ ಕುಮಾರವ್ಯಾಸನ ಕಾಲನಿರ್ಣಯದಲ್ಲಿ ಇವುಗಳ ಪ್ರಾಮಾಣ್ಯವಿದ್ವಾಂಸರ ಪ್ರಶ್ನೆಗಳಿಗೆ ಅತೀತವಾಗಿ ಉಳಿದಿಲ್ಲ. ಆಂತರಿಕ ಸಾಕ್ಷ್ಯವೇ ಆಗಬಹುದಾದ ಭಾಷೆ ಶೈಲಿಗಳನ್ನು ಕುರಿತು ಚರ್ಚೆ ಕುಮಾರವ್ಯಾಸ ಮಧ್ಯಕಾಲೀನನೆಂಬ ಸುಲಭ ನಿರ್ಣಯವನ್ನು ಹೊರಡಿಸಿವೆ. ಮೇಲೆ ಕಾಣಿಸಿದ ಪ್ರಮಾಣಗಳನ್ನಾಧರಿಸಿ ಕುಮಾರವ್ಯಾಸನ ಕಾಲನಿರ್ಣಯದ ಚರ್ಚೆಯಲ್ಲಿ ತಮ್ಮ ನಿಲುವುಗಳನ್ನುಮಂಡಿಸಿದ ವಿದ್ವಾಂಸರಲ್ಲಿ ಪ್ರಮುಖರಾದವರು ಇವರು : ಕಿಟೆಲ್, ರೈಸ್, ಆರ್. ನರಸಿಂಹಾಚಾರ್, ಪಂಚಮುಖಿ, ದೇವೀರಪ್ಪ, ಗೋಂವಿಂದ ಪೈ, ಬೇಂದ್ರೆ, ಡಿ.ಎಲ್. ನರಸಿಂಹಾಚಾರ್, ಎ. ವೆಂಕಟಾಚಾರ್ಯ, ಕೆ. ವೆಂಕಟರಾಯಾಚಾರ್ಯ, ಎನ್. ಅನಂತರಂಗಾಚಾರ್ಯ, ನಾ. ಶ್ರೀ. ರಾಜಪುತರೋಹಿತ, ರಂ.ಶ್ರೀ. ಮುಗುಳಿ, ಸುಜನಾ, ಸೀತಾರಾಮ ಜಾಗೀದಾರ್. ಇವರು ಸೂಚಿಸಿದ ಕಾಲದ ಗಡುವು ೧೧೬೫ ರಿಂದ ೧೫೧೩ ರವರೆಗಿನ ಸುಮಾರು ೧೫೦ ವರ್ಷಗಳ ವ್ಯಾಪ್ತಿಯನ್ನುಳ್ಳದ್ದು. ಇದರಲ್ಲಿ ಸ್ವೀಕಾರಾರ್ಹವೆಂದು ಪರಿಗಣಿಸಬಹುದಾದ ಪೂರ್ವೋತ್ತರ ಗಡುವು ಮೊದಲೇ ಸೂಚಿಸಿರುವಂತೆ ೧೩೪೦ ಮತ್ತು ೧೪೨೫ ರಿಂದ ೧೫೧೩ ರವರೆಗಿನ ಸುಮಾರು ೩೫೦ ವರ್ಷಗಳ ವ್ಯಾಪ್ತಿಯನ್ನುಳ್ಳದ್ದು. ಇದರಲ್ಲಿ ಸ್ವೀಕಾರಾರ್ಹವೆಂದು ಕವಿಯ ಜೀವಿತಾವಧಿ ಹಾಗೂ ಕೃತಿರಚನೆಯ ಕಾಲಗಳು ಸುಮಾರು ೧೩೪೦-೧೪೦೦ ಎಂದು ಬಲುಮಟ್ಟಿಗೆತೋರುತ್ತದೆ. ಡಿ.ಎಲ್. ನರಸೀಂಹಾಚಾರ್, ರಂ.ಶ್ರೀ.ಮುಗುಳಿ, ಸುಜನಾ ಅವರು ನಿರ್ಣಯಿಸಿದ ಕಾಲಗಳು ಈ ಅವಧಿಯ ವ್ಯಾಪ್ತಿಗೆ ಬರುತ್ತವೆ. ಸುಮಾರು ೧೪೦೦ ರಲ್ಲಿ ಕುಮಾರವ್ಯಾಸ ಕೃತಿರಚನೆ ಮಾಡಿದನೆಂದು ಇಟ್ಟುಕೊಳ್ಳಬಹುದು.

## 4.2.1 ದೇಶ

ತನ್ನ ತಂದೆ-ತಾಯಿಗಳು, ವಂಶವಿವರ, ವಾಸಸ್ಥಳ, ಗುರುಪರಂಪರೆ ಹಾಗೂ ವಿದ್ಯಾ ಸಂಸ್ಕಾರಗಳ ಬಗೆಗೂ ಕುಮಾರವ್ಯಾಸ ಏನನ್ನೂ ಹೇಳಿಲ್ಲ. ಕೋಳಿವಾಡದ ಕಾಗದ ಪತ್ರಗಳು, ಹಾಸನದ ಕಾಗದ ಪತ್ರಗಳು, ಮೇಲೆ ಹೇಳಿದ ಕೆಲವು ಶೈವ ಕಾವ್ಯಗಳು ಹಾಗೂ ಐತಿಹ್ಯಗಳು ಈತನ ವೈಯಕ್ತಿಕ ವಿಚಾರಗಳ ಬಗೆಗೆ ಹೇಳುವ ಸಂಗತಿಗಳ ಪ್ರಾಮಾಣ್ಯವನ್ನು ಅನೇಕ ವಿದ್ವಾಂಸರು ಪ್ರಶ್ನಿಸಿದ್ದಾರೆ. ಕವಿ ಗದುಗಿನ ವೀರನಾರಾಯಣನ ಪರಮ ಭಕ್ತನಾಗಿರುವುದರಿಂದಲೂ, ಗದುಗಿನ ದೇವಾಲಯದಲ್ಲಿ ಕವಿಯ ಉಲ್ಲೇಖವುಳ್ಳ ಶಾಸನ ದೊರೆತಿರುವುದರಿಂದಲೂ, ಕವಿಯ ಬಗೆಗೆ ಪ್ರಚಲಿತವಿರುವ ಐತಿಹ್ಯಗಳು ಒಂದಲ್ಲಾ ಒಂದು ವಿಧದಲ್ಲಿ ಗದುಗಿನೊಡನೆ ಕವಿಗೆ ಸಂಬಂಧ ಕಲ್ಪಿಸಿರುವುದರಿಂದಲೂ ಗದುಗು ಇಲ್ಲವೇ ಗದುಗಿನ ಸುತ್ತಮುತ್ತಣ ಪರಿಸರ ಕವಿಯ ಸ್ಥಳವಾಗಿರಬೇಕೆಂದೂ, ಪ್ರಾಯಃ ವೀರನಾರಾಯಣಸ್ವಾಮಿಯ ದೇವಾಲಯದ ಪ್ರಸನ್ನ ವಾತಾವರಣದಲ್ಲಿ ಕುಳಿತು ತನ್ನ ಕೃತಿಯನ್ನು ರಚನೆ ಮಾಡಿರಬೇಕೆಂದೂ ಗ್ರಹಿಸಬಹುದಾಗಿದೆ; ಇದು ಈಗಾಗಲೇ ಗ್ರಾಹ್ಯವಾಗಿರುವ ಅಭಿಪ್ರಾಯವೂ ಆಗಿದೆ.

## 4.2.2 ಕೃತಿಗಳು

'ಕರ್ಣಾಟ ಭಾರತ ಕಥಾಮಂಜರಿ' ಎಂಬ ಕೃತಿಯೊಂದನ್ನು ಕುಮಾರವ್ಯಾಸ ರಚಿಸಿದ್ದಾನೆಂಬುದು ಸುವಿದಿತ ಸಂಗತಿ. ಇದು ಇವನ ಏಕೈಕ ಕೃತಿ. ಇದರ ಬಗೆಗೆ ಹೆಚ್ಚಿನ ವಿಚಾರವನ್ನು ಮುಂದೆ ತಿಳಿದುಕೊಳ್ಳುತ್ತೀರಿ. ಕುಮಾರವ್ಯಾಸ 'ಐರಾವತ' ಎಂಬ ಇನ್ನೊಂದು ಚಿಕ್ಕ ಕೃತಿಯನ್ನು ರಚಿಸಿದ್ದಾನೆಂಬ ವಿಚಾರವಾಗಿ ಕೆಲವು ಮಾತುಗಳನ್ನಿಲ್ಲಿ ತಿಳಿಯೋಣ. ಮಹಾಭಾರತದ ಕಥೆಯೊಡನೆ ಸಂಬಂಧ ಕಲ್ಪಿಸಿ ಕುಂತಿ ಆಚರಿಸಿದಳೆಂದು ಹೇಳುವ ಗಜಗೌರೀವ್ರತದ ಕಥೆಯನ್ನು ಹೇಳುವ ಕೃತಿಯೇ 'ಐರಾವತ' ಅಥವಾ 'ಐರಾವತ ನೋಂಪಿ'. ಇಂದು ಕುಮಾರವ್ಯಾಸನ ಹೆಸರಿನೊಡನೆ ಥಳುಕು ಹಾಕಿಕೊಂಡಿದೆ. ಹೀಗೆ ಥಳಕು ಹಾಕಿಕೊಳ್ಳುವುದಕ್ಕೆ ಕಾರಣ ಈ ಕೃತಿಯಲ್ಲಿ ಗದುಗಿನ ವೀರನಾರಾಯಣನ ಸ್ತುತಿ ಇರುವುದು, ವೇದವ್ಯಾಸ ಮುನಿಗೆ ವಂದನೆ ಹೇಳಿರುವುದು. ಗುದಗಿನ ವೀರನಾರಾಯಣ, ನಾರಾಯಣ ಎಂಬ ಪ್ರಯೋಗಗಳು ಗ್ರಂಥಾಂತರದಲ್ಲಿಯೂ ಅಲ್ಲಲ್ಲಿ ಬರುತ್ತವೆ. ಕೃಷ್ಣ ಭಕ್ತಿ, ಹರಿ-ಹರರಲ್ಲಿ ಸಮಾನ ಗೌರವ-ಇವು ಭಾರತ ಕಥಾಮಂಜರಿಯಂತೆ ಇಲ್ಲಿಯೂ ಬಂದಿವೆ. 'ಕೇಳು ಜನಮೇಜಯ ಧರಿತ್ರೀಪಾಲ' ಎಂಬ ಸಂಬೋಧನೆ ಕೂಡ ಅಲ್ಲಲ್ಲಿ ಬಂದಿದೆ. ಅಭಿವ್ಯಕ್ತಿ ವಿಧಾನ ಭಾರತ ಕಥಾಮಂಜರಿಗೆ ಸಮೀಪವಾಗಿದೆ. ಆದರೆ ಕೃತಿಯ ಭಾಷೆ, ಬಂಧ, ಮಹೋನ್ನತಿ ಮೊದಲಾದ ದೃಷ್ಟಿಗಳಿಂದ ನೋಡಿದಾಗ ಎರಡಕ್ಕೂ ಸಾಕ್ಷಿಯಾದ ಭಾರತ ಕಥಾಮಂಜರಿಯ ಕರ್ತೃವಿನಿಂದ ರಚನೆಯಾಯಿತೆಂದು ಹೇಳುವುದು ಕಷ್ಟ. ಈ ಕೃತಿಯ ರಚನೆಯಲ್ಲಿ ಭಾರತ ಕಥಾಮಂಜರಿಯ ದಟ್ಟ ಪ್ರಭಾವವೂ, ಅನುಕರಣೆಯೂ ಇರುವುದರಿಂದ ಯಾರೋ ಅನುಕರಣಶೀಲನಾದ ಸಾಮಾನ್ಯ ಪ್ರತಿಭೆಯ ಕವಿಯೊಬ್ಬನಿಂದ ಈ ಕೃತಿ ರಚನೆಯಾಗಿದೆ ಎನ್ನಬಹುದು. ಕಾಲಾಂತರದಲ್ಲಿ ಅನೇಕ ಮಂದಿ ಪ್ರತಿಕಾರರು ಇದರಲ್ಲಿ ಬಹಳವಾಗಿ ಹಸ್ತಕ್ಷೇಪ ನಡೆಸಿರುವಂತೆಯೂ ಕಾಣುತ್ತದೆ. ವಸ್ತು, ಕಥನ, ತಂತ್ರ ಹಾಗೂ ಶೈಲಿಯಲ್ಲಿ ಈ ಕೃತಿ ಭಾರತ ಕಥಾ ಮಂಜರಿಗೆ ಸಮೀಪವಾಗಿರುವುದು ಕುಮಾರವ್ಯಾಸ ಕೃತವೆಂಬ ತಪ್ಪು ಗ್ರಹಿಕೆಗೆ ಕಾರಣವಾಗಿದೆ.

## 4.2.3 'ಕರ್ಣಾಟ ಭಾರತ ಕಥಾಮಂಜರಿ' ಕೃತಿ ಪರಿಚಯ

ಕುಮಾರವ್ಯಾಸ ಭಾರತ, ಗದುಗಿನ ಭಾರತ, ಕನ್ನಡ ಭಾರತ -ಇವು 'ಕರ್ಣಾಟ ಭಾರತ ಕಥಾಮಂಜರಿ'ಯ ಪರ್ಯಾಯ ನಾಮಗಳು. ೮೦೦೦ಕ್ಕೂ ಹೆಚ್ಚು ಪದ್ಯಗಳಿರುವ ಈ ಕೃತಿ ಭಾಮಿನಿಷಟ್ಪದಿಯಲ್ಲಿ ರಚನೆಯಾಗಿದೆ. ಹತ್ತು ಪರ್ವಗಳಾಗಿ ವಿಂಗಡಣೆಯಾಗಿದೆ. ಪ್ರತಿ ಪರ್ವಗಳನ್ನೂ ಹಲವು ಸಂಧಿಗಳಾಗಿ ವಿಂಗಡಿಸಿದ್ದು ಪ್ರತಿ ಸಂಧಿಯ ಮೊದಲಲ್ಲಿ ಸೂಚನಾ ಪದ್ಯವನ್ನು ರಚಿಸಲಾಗಿದೆ. ಭಾಮಿನಿಯ ಅರ್ಧಷಟ್ಪದಿಯಲ್ಲಿರುವ ಈ ಪದ್ಯ ಆಯಾ ಸಂಧಿಯಲ್ಲಿ ನಿರೂಪಿವಾಗಿರುವ ಕಥೆಯ ಸೂಚನೆಯನ್ನು ಕೊಡುತ್ತದೆ. ನಡುಗನ್ನಡದ ತಿಳಿಯಾದ ಭಾಷೆಯಲ್ಲಿ ರಚಿತವಾಗಿರುವ ಈ ಕೃತಿ ಕನ್ನಡದ ಎರಡನೆಯ ಮಹಾಕಾವ್ಯ.

### 4.2.3.1 ಆಕರ

ಪ್ರಾಚೀನ ಕಾಲದ ಬಹುತೇಕ ಕನ್ನಡ ಕೃತಿಗಳಂತೆ ಭಾರತವೂ ಸಂಸ್ಕೃತ ಸಾಹಿತ್ಯವನ್ನು ಅವಲಂಭಿಸಿ ರಚನೆಯಾಗಿದೆ. ವೇದವ್ಯಾಸರಿಂದ ರಚನೆಯಾದ ಮಹಾಭಾರತ ಕುಮಾರವ್ಯಾಸ ಭಾರತದ ಆಕರ ಕೃತಿ. ವ್ಯಾಸ ಕೃತ ಸಂಸ್ಕೃತ ಮಹಾಭಾರತವನ್ನು ಕುಮಾರವ್ಯಾಸ ಆಕರವನ್ನಾಗಿ ಸ್ವೀಕರಿಸಿದ್ದಾನೆಂಬುದು ಕೃತಿಯ ಮೂಲಕ ಸ್ಪಷ್ಟವಾಗಿ ತಿಳಿಯುತ್ತದೆ. ವ್ಯಾಸರ ಶಿಷ್ಯರಲ್ಲಿ ಒಬ್ಬರಾದ ಶುಕಮುನಿಗೆ ಸಮಾನನೆಂದು ಕವಿ ತನ್ನನ್ನು ಭಾವಿಸಿಕೊಂಡು 'ಶುಕರೂಪ'ನೆಂದು ಕರೆದುಕೊಂಡಿದ್ದಾನೆ. ಕೃತಿ ರಚನೆಯ ಕಾಲಕ್ಕೆ ತನಗೆ ವ್ಯಾಸರಿಂದ ಆಗಿರುವ ಉಪಕೃತಿಯನ್ನು ಸ್ಮರಿಸುವಂತೆ ತನ್ನನ್ನು ವ್ಯಾಸರ ಕುಮಾರನೆಂದು ತಿಳಿದು

'ಕುಮಾರವ್ಯಾಸ' ಎಂದು ಆರಂಭದ ಸ್ತುತಿವಾಕ್ಯಗಳಲ್ಲಿ ವ್ಯಾಸರನ್ನು ಸ್ಮರಿಸಿಯೂ ಇದ್ದಾನೆ. ಇದೆಲ್ಲಕ್ಕಿಂತ ಹೆಚ್ಚಾಗಿ ಕುಮಾರವ್ಯಾಸ ತನ್ನ ಭಾರತ ಕಾವ್ಯವನ್ನು ಸಂಸ್ಕೃತ ಮಹಾಭಾರತದ ಕಥಾ ಸರಣಿಯನ್ನು ಅನುಸರಿಸಿಯೇ ರಚಿಸಿದ್ದಾನೆ. ಎಷ್ಟೋ ಕಡೆ ಅಲ್ಲಿನ ಭಾವ-ಭಾಷೆಗಳನ್ನೂ ನೇರವಾಗಿ ತರ್ಜುಮೆ ಮಾಡಿರುವುದು ಕಂಡು ಬರುತ್ತದೆ. ಕಥನ ನಿರೂಪಣೆ, ಮೌಲ್ಯ ಪ್ರತಿಪಾದನೆ, ಜೀವನ ದೃಷ್ಟಿಗಳಲ್ಲಿ ಕುಮಾರವ್ಯಾಸ ಪಂಪನಿಗಿಂತಲೂ ಹೆಚ್ಚಾಗಿ ವ್ಯಾಸರನ್ನು ಅನುಸರಿಸಿರುವುದು ಕಂಡುಬರುತ್ತದೆ.

### 4.2.3.2 ಕಥಾವಸ್ತು

ಕುಮಾರವ್ಯಾಸ ಭಾರತದ ವಸ್ತು ಸಂಸ್ಕೃತ ಮಹಾಭಾರತದ್ದು ಎಂದು ಮೇಲೆ ಹೇಳಿದೆ. ಸಂಸ್ಕೃತ ಮಹಾಭಾರತ ಹದಿನೆಂಟು ಪರ್ವಗಳಲ್ಲಿ ಆಖ್ಯಾನ ಉಪಾಖ್ಯಾನಗಳು, ಎಳೆ ಎಳೆಯಾದ ಸುದೀರ್ಘ ವಿವರಗಳು, ವರ್ಣನೆಗಳಿಂದ ಇಡಿಕಿರಿದ ಒಂದು ಬೃಹತ್ ಕಾವ್ಯ. ಪಾಂಡವರು ಹಾಗೂ ಧಾರ್ತರಾಷ್ಟ್ರ ದಾಯಾದಿ ಮಾತ್ಸರ್ಯವೇ ಅದರ ಕಥಾವಸ್ತುವಿನ ಮಾತೃಕೆ. ಆದರೂ ಆ ಮಹಾಕಾವ್ಯ ತನ್ನನ್ನು ಅಷ್ಟಕ್ಕೆ ಸೀಮಿತಗೊಳಿಸಿಕೊಂಡಿಲ್ಲ. ಅದರ ಹಿಂದು ಮುಂದಿನ ವಿಸ್ತಾರವಾದ ಕಥಾಸಾಗರವನ್ನು ತನ್ನಲ್ಲಿ ಗರ್ಭೀಕರಿಸಿಕೊಂಡಿದೆ. ಕುರುವಂಶದ ವಿವರಗಳು, ಅದರೊಟ್ಟಿಗೆ ಕ್ಷತ್ರಿಯ ವಂಶದ ಮೂಲಾಂಕುರದ ವಿವರಗಳಿಂದ ಮೊದಲ್ಗೊಂಡು ಧರ್ಮರಾಯನ ನಿರ್ಗಮನದ ಮೂಲಕ ಆತ್ಮನ ಸ್ವರ್ಗಯಾತ್ರೆಯ ಚಿತ್ರಣದವರೆಗೆ ಹಲವು ಜೀವಮಾನಗಳ ಕಥೆಯನ್ನು ಅದರ ಎಲ್ಲ ಆಯಾಮಗಳೊಂದಿಗೆ ಸವಿಸ್ತಾರವಾಗಿ ಭಾರತ ನಿರೂಪಿಸುತ್ತದೆ. ಈ ಭಾರತ ಕಥೆಯ ಮುಖ್ಯ ಭಾಗ, ಅಂದರೆ ಪಾಂಡವರು-ಧಾರ್ತರಾಷ್ಟ್ರರ ದಾಯಾದಿ ಮಾತ್ಸರ್ಯದ ಕಥಾನಕ. ಆದಿಪರ್ವದ ಉತ್ತರಾರ್ಧದಿಂದ ಸೌಪ್ತಿಕ ಪರ್ವದವರೆಗಿನ ಹತ್ತು ಪರ್ವಗಳಲ್ಲಿ ನಿರೂಪಿತವಾಗಿದೆ. ಆಖ್ಯಾನ, ಉಪಾಖ್ಯಾನಗಳ ನಿದರ್ಶನಾತ್ಮಕ ಹಿನ್ನೆಲೆಯಲ್ಲಿ ನ್ಯಾಯಾನ್ಯಾಯದ, ಧರ್ಮಾಧರ್ಮದ, ಒಟ್ಟಾರೆ ಕ್ಷಾತ್ರ ಧರ್ಮದ ಗುಣ -ದುರ್ಗುಣಗಳ ವಿಚಕ್ಷಣೆಯನ್ನು ಈ ಭಾಗ ನಡೆಸುತ್ತದೆ. ಬದುಕಿನ ಕಟುವಾಸ್ತವದ ಸೂಕ್ಷ್ಮಾತಿಸೂಕ್ಷ್ಮ ಮುಖಗಳ ವಿವರಗಳನ್ನು ಬುನಾದಿಯಾಗಿರಿಸಿಕೊಂಡು, ಅನ್ಯಾಯದ ವಿರುದ್ಧ, ನ್ಯಾಯದ, ಅಧರ್ಮದ ವಿರುದ್ಧ ಧರ್ಮದ ಪರಿಣಾಮವನ್ನು ಸಾದರಪಡಿಸುತ್ತದೆ. ಕುಮಾರವ್ಯಾಸ ಭಾರತ ಹತ್ತು ಪರ್ವಗಳ ತನ್ನ ಕಥಾ ಹಂದರದೊಳಗೆ ಅಳವಡಿಸಿಕೊಂಡಿರುವುದು ಈ ಭಾಗವನ್ನೆ. ಕರ್ಣನೂ ಸೇರಿದಂತೆ ಪಾಂಡವರು ಮತ್ತು ಧಾರ್ತರಾಷ್ಟ್ರರ ಜನನ ಸಂದರ್ಭದಿಂದ ಮೊದಲ್ಗೊಂಡು ಕುರುಕ್ಷೇತ್ರ ಯುದ್ಧಾನಂತರದ ಧರ್ಮರಾಯನ ಪಟ್ಟಾಭಿಷೇಕದವರೆಗಿನ ಕಥೆಯನ್ನು ಕುಮಾರವ್ಯಾಸ ತನ್ನ ಕಾವ್ಯದಲ್ಲಿ ನಿರೂಪಿಸಿದ್ದಾನೆ. ತನ್ನ ಸಂವಿಧಾನಕ್ಕೆ ತಕ್ಕಂತೆ ಮೂಲ ಕಥೆಯನ್ನು ಸಂಗ್ರಹಿಸಿದ್ದಾನೆ; ಕೆಲವೊಂದು ಮಾರ್ಪಾಡುಗಳು ಹಾಗೂ ಸೇರ್ಪಡೆಗಳನ್ನೂ ಮಾಡಿದ್ದಾನೆ.

### 4.2.3.3 ಪಾತ್ರಗಳು : ಕೃಷ್ಣ, ದುರ್ಯೋಧನ, ಕರ್ಣ

#### ಕೃಷ್ಣ

ಕೃಷ್ಣ ಹಾಗೂ ಧರ್ಮರಾಯ ಇಬ್ಬರಲ್ಲಿ 'ಕರ್ಣಾಟ ಭಾರತ ಕಥಾಮಂಜರಿ'ಯ ನಾಯಕ ಯಾರು ಎಂಬುದು ಒಂದು ಚರ್ಚೆಯ ವಿಷಯ. ಕೃಷ್ಣ ಈ ಕಾವ್ಯದ ನಾಯಕ ಎಂಬುದು ಬಹುಮಟ್ಟಿಗೆ ಸ್ವೀಕಾರ ಎಂಬಂತೆ ಕಂಡುಬರುತ್ತದೆ. ಧರ್ಮರಾಯ ಕಾವ್ಯದ ನಾಯಕ ಎಂಬ ನಿಲುವನ್ನು ಕೆಲವರು ಮಾತ್ರ ತಳೆದಿರುವಂತಿದೆ. ಕೃಷ್ಣನ ಸೂತ್ರಧಾರಿತ್ವದ ಅಂಶವನ್ನು ಒಪ್ಪಿಕೊಂಡರೂ ಧರ್ಮರಾಯ ಈ ಕಾವ್ಯದ ನಾಯಕ ಎನಿಸುವುದಿಲ್ಲ ಎಂಬುದು ಗಮನಿಸಬೇಕಾದ ಮುಖ್ಯವಾದ ಸಂಗತಿ. ಕುಮಾರವ್ಯಾಸನಿಗೆ ಆಕರವಾದ ವ್ಯಾಸಭಾರತದಲ್ಲಿ ಧರ್ಮರಾಯ ಕಥೆಯ ನಾಯಕನಾಗುತ್ತಾನೆ ಎಂಬುದು ನಿರ್ವಿವಾದದ ಸಂಗತಿ. ಆದರೆ ವ್ಯಾಸರಂತೆ ಕುಮಾರವ್ಯಾಸ ಭಾರತ ಕಥೆಯನ್ನು ಲೋಕ ಜೀವನದ ವಾಸ್ತವದ ನೆಲೆಗಟ್ಟಿನ ದಿವ್ಯದರ್ಶನದ ಕಥೆಯನ್ನಾಗಿ ಮಾತ್ರ ಕಂಡಿಲ್ಲ. ಅವನಿಗೆ ಅದು ಆಮುಷ್ಮಿಕ ಸಾಧನೆಯ ಸಾಧನ, ಕೃಷ್ಣ

ಸಾಕ್ಷಾತ್ಕಾರದ ಮಾರ್ಗ. ಕೃಷ್ಣನ ಇಲ್ಲಿನ ಸೂತ್ರಧಾರಿತ್ವ ಕುಮಾರವ್ಯಾಸನ ಕೃಷ್ಣ ಭಕ್ತಿಯ ಮೂಲಭೂತ ಅಂಶದ ಮೇಲೆ ನಿಂತಿದೆ. ಪಾತ್ರಗಳ ಸ್ವಭಾವ ಮತ್ತು ನಡವಳಿಕೆಗಳಲ್ಲಿ ಕುಮಾರವ್ಯಾಸನು ಕೃಷ್ಣನ ಕೃಪಾಡವನ್ನು ಮೆರೆಯಿಸಿದ್ದಾನೆ. ಹೀಗಿರುವುದರಿಂದ ಕುಮಾರವ್ಯಾಸ ಭಾರತದ ನಾಯಕ ನಿಶ್ಚಯವಾಗಿ ಕೃಷ್ಣನೇ ಆಗಿದ್ದಾನೆ. ಉಳಿದದ್ದೆಲ್ಲಾ ಆ ನಾಯಕ ಶಕ್ತಿಯ ಅಧೀನ.

ಕೃಷ್ಣನ ನಾಯಕ ಶಕ್ತಿಯ ತಿರುಳು ಕೃತಿಯಲ್ಲಿ ವ್ಯಾಪಿಸುವುದು ಎರಡು ಅಂಶಗಳ ಆಧಾರದ ಮೇಲೆ. ದೈವೀಕತೆ ಅವುಗಳಲ್ಲಿ ಒಂದು. ಇದೇ ಪ್ರಧಾನವಾದ ಅಂಶ. ಇನ್ನೊಂದು ರಾಜತಾಂತ್ರಿಕ ಕುಶಲತೆ. ಕೃಷ್ಣ ದೈವವಾಗಿ ಕುಮಾರವ್ಯಾಸ ಭಾರತದ ಎಲ್ಲ ಮುಖ್ಯ ಪಾತ್ರಗಳನ್ನೂ ತನ್ನ ಗುರುತ್ವ ಕೇಂದ್ರದತ್ತ ಆಕರ್ಷಿಸಿದರೆ, ಒಬ್ಬ ರಾಜಕಾರ್ಯಪಟುವಾಗಿ ಪಾಂಡವರ ಹಿತಾಪೇಕ್ಷಿಯಾಗುತ್ತಾನೆ. ತಾನು ಪಾಂಡವರ ಹಿತೈಶಿ ಎಂಬುದನ್ನು ಆತ ಕಾವ್ಯದ ಮೊದಲಲ್ಲಿಯೇ ಪ್ರಕಟಿಸಿಕೊಳ್ಳುತ್ತಾನೆ. ಕೃಷ್ಣಸ್ತುತಿ, ಕೃಷ್ಣಭಕ್ತಿ, ಕೃಷ್ಣ ಶರಣಾಗತಿಗಳೆಂಬ ತ್ರಿಭಾವವೂ, ಕೃಷ್ಣನ ಭಕ್ತವತ್ಸಲತೆಯೂ ದ್ರೌಪದೀ ಸ್ವಯಂವರದ ಸಂದರ್ಭದಲ್ಲಿ ಕಾಣಿಸಿಕೊಂಡು ಕಾವ್ಯದುದ್ದಕ್ಕೂ ಏಕಪ್ರಕಾರವಾಗಿ ಪ್ರವಹಿಸಿದೆ. ಕುಮಾರವ್ಯಾಸ ಭಾರತದ ಪ್ರಕಾರ ಕೃಷ್ಣ ಭೂಭಾರವನ್ನಿಳಿಸಲು ಜನ್ಮವೆತ್ತಿ ಬಂದು ಖಳಮಂಡಲವನ್ನೆಲ್ಲಾ ಒರಸಿ ತನ್ನ ಕಾರ್ಯವನ್ನು ಸಾಧಿಸಿಕೊಂಡ ಭಕ್ತ ಬಂಧು ಮಹಾವಿಷ್ಣು ಕಾವ್ಯದಲ್ಲಿ ಕಾಣಿಸಿಕೊಳ್ಳುವ ಕೃಷ್ಣನ ಈ ಸಿದ್ಧಸ್ವರೂಪ ಆತನನ್ನು ದೈವತ್ವಕ್ಕೇರಿಸಿದೆ. ಆದರೆ ಕುಮಾರವ್ಯಾಸ ಕೃಷ್ಣನಲ್ಲಿ ಮಾನವಭಾವಗಳನ್ನು ತುಂಬುವುದನ್ನೂ ಮರೆತಿಲ್ಲ. ಹಾಗಾಗಿ ಇಲ್ಲಿನ ಕೃಷ್ಣ ಮಾನವತ್ವವನ್ನು ಮೈಗೂಡಿಸಿಕೊಂಡ ದೇವನಾಗಿ ಕಾಣುತ್ತಾನೆ. ಕೃಷ್ಣ ಪಾತ್ರದ ವಿಶಿಷ್ಟತೆಯನ್ನೂ, ಆ ಪಾತ್ರದ ಚಿತ್ರಣದಲ್ಲಿ ಕುಮಾರವ್ಯಾಸ ತೋರಿಸುವ ಸಮತೋಲನತೆಯನ್ನೂ ಮಾನುಷ ಮತ್ತು ದೈವೀ ಸ್ವಭಾವವನ್ನು ಕೃಷ್ಣ ಪ್ರದರ್ಶಿಸುವುದರಲ್ಲಿ ಕಾಣಬೇಕು.

## ದುರ್ಯೋಧನ

ಭಾರತಕಥೆಯ ಮುಖ್ಯ ಪಾತ್ರಗಳಲ್ಲಿ ಒಂದು ದುರ್ಯೋಧನನದು; ಪ್ರತಿ ನಾಯಕನ ಸ್ಥಾನದಲ್ಲಿ ನಿಲ್ಲುವಂತಹದು. ಆದರೆ ಭಾರತ ಕಥೆಯ ದುರ್ಯೋಧನನ ಪ್ರತಿನಾಯಕತ್ವದ ಬಗೆಗೆ ಮಾತನಾಡುವಾಗ ಎಚ್ಚರಿಕೆಯಿಂದಿರಬೇಕಾಗುತ್ತದೆ. ವಾಲ್ಮೀಕಿ ರಾಮಾಯಣದ ರಾವಣನ ಬಗೆಗೆ ಮಾತನಾಡುವಷ್ಟು ಸರಳವಾಗಿ ಭಾರತಕಥೆಯ ದುರ್ಯೋಧನನ ಬಗೆಗೆ ಮಾತನಾಡಲು ಬರುವುದಿಲ್ಲ. ವ್ಯಾಸ ಭಾರತದಲ್ಲೂ ಅವನ ದುಷ್ಟತನಗಳ ಬಗೆಗೆ ಸಾಕಷ್ಟು ಚಿತ್ರಣಗಳಿವೆಯಾದರೂ ಒಳ್ಳೆಯ ನಡೆತೆಗಳ ಬಗೆಗೂ ಹೇಳಲಾಗಿದೆ. ಅವನನ್ನು 'ಅಭಿಮಾನಧನ'ಎಂದೆಲ್ಲಾ ಕನ್ನಡ ಭಾರತಗಳು ಚಿತ್ರಿಸಿವೆ. ಗದಾಯುದ್ಧದ ಸಂದರ್ಭದಲ್ಲಿ ಕೆಳಕ್ಕೆ ಬಿದ್ದ ಭೀಮನನ್ನು ಹೊಡೆಯದೆ ಎಚ್ಚರಗೊಳ್ಳಲೆಂದು ತನ್ನ ಗದೆಯಿಂದ ಗಾಳಿ ಬೀಸಿದನೆನ್ನುವಾಗ ದುರ್ಯೋಧನ ಒಬ್ಬ ಉದಾತ್ತ ವೀರನಂತೆ ಕಂಗೊಳಿಸುತ್ತಾನೆ. ಆದರೆ ಭಾರತಕಥೆಗಳ ದುರ್ಯೋಧನನನ್ನು ಉದಾತ್ತೆಯ ನೆಲೆಗೆ ಏರಿಸುವುದಕ್ಕಂತೂ ಆಗುವುದಿಲ್ಲ. ಅವನದು ಸಂಕೀರ್ಣ ಮನಃಸ್ಥಿತಿಯ, ರಾಜಸತಾಮಸಗಳ ನಡುವೆ ಹೊಯ್ದಾಡುವ, ತಾಮಸದ ಕಡೆಗೇ ಹೆಚ್ಚು ಬೀಗುವ ಪಾತ್ರ. ಪಂಪ ರನ್ನನಂತೆ ಕುಮಾರವ್ಯಾಸ ಕೂಡ ದುರ್ಯೋಧನನ ಬಗೆಗೆ 'ಕುರುರಾಜೋತ್ತಮ', 'ಮಾನನಿಧಿ' 'ರಾಜರವಿ' ಎಂಬ ವಿಶೇಷಣಗಳನ್ನು ಹಚ್ಚಿದ್ದಾನೆ. ಅವನ ಮುಡಿಯನ್ನು ಸಹ 'ಸಿರಿಮುಡಿ' ಎಂದು ಕರೆದಿದ್ದಾನೆ. ಕುಮಾರವ್ಯಾಸ ದುರ್ಯೋಧನನನ್ನು 'ಕೈತವದ ಕಣಿ' ಎಂದೂ ಕರೆದಿದ್ದಾನೆ. ದುರ್ಯೋಧನ, ಶಕುನಿ, ಕರ್ಣ, ದುಶ್ಯಾಸನರ ಗುಂಪನ್ನು 'ದುಷ್ಟಚತುಷ್ಟಯ' ಎಂದಿದ್ದಾನೆ. ಯುದ್ಧಪೂರ್ವದ ಪರ್ವಗಳಲ್ಲಿನ ಅವನ ದುರ್ವರ್ತನೆಗಳ ಬಗೆಗೆ ಸಾಕಷ್ಟು ಒತ್ತು ಕೊಟ್ಟಿರುವ ಕುಮಾರವ್ಯಾಸ ಕೂಡ ಯುದ್ಧ ಪರ್ವಗಲ್ಲಿ ಅವನ ವೀರ ನಿಲುವನ್ನು ಆಗಾಗ ಕಂಡರಿಸಿರುವುದು ಆಶ್ಚರ್ಯವೇ ಆಗುತ್ತದೆ. ಅಂದರೆ ಭಾರತ ಕಥೆಯ ಮರುಸೃಷ್ಟಿಗೆ ಕೈ ಹಾಕಿದ ಕವಿಗೆ ದುರ್ಯೋಧನನ ವ್ಯಕ್ತಿತ್ವದ ಮತ್ತೊಂದು ಮುಖವನ್ನು ಸ್ಪರ್ಶಿಸದೆ ಹೋಗುವುದು ಸಾಧ್ಯವಾಗುವುದಿಲ್ಲ ಎಂಬುದನ್ನು ಇದು ಸಿದ್ಧಪಡಿಸುವಂತೆ ತೋರುತ್ತದೆ.

**ಕರ್ಣ**

ಇಡೀ ಭಾರತ ಕಥೆಯಲ್ಲಿ ಹೆಚ್ಚಿನ ಚರ್ಚೆಗೆ ಗುರಿಯಾಗಿರುವ ಪಾತ್ರ ಕರ್ಣನದು. ಅದು ಹೊಂದಿರುವ ಸಮಸ್ಯೆಗಳೇ ಇದಕ್ಕೆ ಕಾರಣ. ಅದೊಂದು ಸಮಸ್ಯಾತ್ಮಕ ಪಾತ್ರ. ಅದರ ಸಮಸ್ಯೆಗಳನ್ನು ಪಾತ್ರದ ವೈಯಕ್ತಿಕ ನೆಲೆ ಮತ್ತು ಕಥೆಯ ಸಂವಿಧಾನಿಕ ನೆಲೆಗಳೆರಡರಲ್ಲಿಯೂ ವಿವೇಚಿಸುವುದು ಸಾಧ್ಯ. ಧೃತರಾಷ್ಟ್ರನನ್ನು ಬಿಟ್ಟರೆ ಭಾರತ ಕಥೆಯಲ್ಲಿ ಕರ್ಣನಷ್ಟು ವಿರೋಧಾಭಾಸಗಳನ್ನು ಪ್ರಕಟಿಸುವ ಪಾತ್ರ ಇನ್ನೊಂದಿಲ್ಲ. ಒಂದು ಕಡೆ ನನ್ನಿ, ತ್ಯಾಗ, ಸ್ವಾಮಿನಿಷ್ಠೆ - ಕುಮಾರವ್ಯಾಸನಲ್ಲಿ ಉಚ್ಚಸ್ತರದ ದೈವಭಕ್ತಿಯೂ ಸಹ ಇವುಗಳನ್ನು ಪ್ರಕಟಿಸುತ್ತಾ, ಇನ್ನೊಂದು ಕಡೆ 'ದುಷ್ಟಚತುಷ್ಟಯ' ಕೂಟದ ಸದಸ್ಯನಾಗಿ ಅತ್ಯಂತ ನೀಚತನವನ್ನೂ ಪ್ರಕಟಿಸುತ್ತಾನೆ ಕರ್ಣ. ಈ ಎರಡು ತುದಿಗಳ ನಡುವೆ ಕುಲದ ಸಮಸ್ಯೆಯನ್ನೂ, ಅದರ ಫಲವಾದ ನಿಂದೆ ಋಣಭಾರದ ಹೊರೆಯನ್ನೂ ಈ ಪಾತ್ರ ಅನುಭವಿಸುತ್ತದೆ. ಇದು ಕರ್ಣಪಾತ್ರದ ನಿಜವಾದ ವಾಸ್ತವಿಕ ನೆಲೆಗಟ್ಟು. ಅದರ ಎಲ್ಲ ಗುಣಾವಗುಣಗಳಿಗೂ ಸಾಫಲ್ಯ ವೈಫಲ್ಯಗಳಿಗೂ ಈ ನೆಲೆಗಟ್ಟೇ ಕಾರಣವಾಗುತ್ತದೆ. ಹೀಗೆ ವ್ಯಕ್ತಿಗತವಾಗಿ ಸಮಸ್ಯೆಗಳ ಇರುಕಿಗೆ ಸಿಕ್ಕಿಕೊಂಡು ಅಪಾರವಾದ ಮನೋವೇದನೆಯನ್ನು ಅನುಭವಿಸುವುದರಿಂದಲೇ ಈ ಪಾತ್ರ ತನ್ನ ಸ್ವಭಾವದಲ್ಲಿ ವೈರುಧ್ಯಗಳನ್ನು ಪ್ರಕಟಿಸುತ್ತದೆ. ಅಂತರಂಗದ ಮಹತ್ವಾಕಾಂಕ್ಷೆ ಮತ್ತು ಬಹಿರಂಗದ ದುಷ್ಪ್ರೇರಣಗಳು ಕರ್ಣನ ವ್ಯಕ್ತಿತ್ವದ ಸೂಕ್ಷ್ಮ ನೆಲೆಯಲ್ಲಿ ಕೆಲಸ ಮಾಡಿ ಅವನನ್ನು ಸಂದಿಗ್ಧಗಳಲ್ಲಿ ಸಿಲುಕಿಸಿ ತೆಳಲಿಸಿದಂತೆ ಕಥಾನಿರ್ವಹಣೆಯ ದೈವೀಯೋಜನೆಯನ್ನೂ ತೊಳಲಿಸಿದೆ ಎನಿಸುತ್ತದೆ. ಹಾಗಾಗಿ ಕರ್ಣನ ವ್ಯಕ್ತಿತ್ವ ಯುದ್ಧಪೂರ್ವದ ಪರ್ವಗಳಲ್ಲಿ ಒಂದು ದಿಕ್ಕಿನಲ್ಲಿ ಪ್ರವಹಿಸುತ್ತದೆ. ಕೃಷ್ಣ ಭಕ್ತಿಯ ಛಾಪನ್ನು ಬೇರೆ ಕೊಟ್ಟಿರುವುದರಿಂದಾಗಿ ಕರ್ಣಪಾತ್ರದ ನಿರ್ವಹಣೆಯಲ್ಲಿನ ಈ ಒಡಕು ಕುಮಾರವ್ಯಾಸ ಭಾರತದಲ್ಲಿ ಮತ್ತಷ್ಟು ಎದ್ದು ಕಾಣುತ್ತದೆ.

## 4.2.4 ಪ್ರಸಂಗಗಳು

### 4.2.4.1 ದ್ರೌಪದೀ ಸ್ವಯಂವರ

ದ್ರೌಪದೀ ಸ್ವಯಂವರ ಪ್ರಸಂಗ ಕುಮಾರವ್ಯಾಸ ಭಾರತದಲ್ಲಿ ಚಿತ್ರಿತವಾಗಿರುವ ಶೃಂಗಾರ ಸನ್ನಿವೇಶಗಳಲ್ಲಿ ಒಂದು. ಕಾವ್ಯದಲ್ಲಿ ಅತ್ಯಂತ ದೀರ್ಘವಾಗಿ ಸವಿವರವಾಗಿ ನಿರೂಪಿತವಾಗಿರುವ ಸನ್ನಿವೇಶ ಇದು. ಶೃಂಗಾರದೊಡನೆ ವಿಷಾದವೂ, ಆ ನಡುವೆ ಹಾಸ್ಯವೂ ಸೇರಿಕೊಂಡಿರುವುದು ಇದರ ವಿಶೇಷ. ಅಲ್ಲದೆ ಕುಮಾರವ್ಯಾಸ ಶೃಂಗಾರಾದಿ ರಸ ನಿರೂಪಣೆಗೆ ತೊಡಗಿದಾಗ ಸಾಂಪ್ರದಾಯಿಕ ಕಾವ್ಯ ಲಕ್ಷಣಗಳಿಗೆ ಕಟ್ಟು ಬೀಳುವುದಿಲ್ಲ ಎಂಬುದು ಮುಖ್ಯ. ಇಂತಹ ನಿರೂಪಣೆಗಳನ್ನು ಕೊಡುವಾಗ ತಾನು ಆಧರಿಸಿದ ವ್ಯಾಸ ಭಾರತದ ಜಾಡನ್ನು ಸಾಮಾನ್ಯವಾಗಿ ಮೀರುವುದನ್ನು ನೋಡಿದರೆ ಆತ ಉದ್ದೇಶ ಪೂರ್ವಕವಾಗಿಯೇ ಇಂತಹ ನಿರೂಪಣೆಗಳಲ್ಲಿ ತೊಡಗುತ್ತಾನೆಂಬುದು ಸ್ಪಷ್ಟ. ಇಂತಹ ನಿರೂಪಣೆ ಸಾಂಪ್ರದಾಯಿಕತೆಯಿಂದ ಮುಕ್ತವಾಗಿ ಚಲ್ಲವರಿದಿರುವುದು ಅವನ ಸ್ವಚ್ಛಂದ ಪ್ರತಿಭಾವಿಲಾಸದ ಕುರುಹು. ಶೃಂಗಾರರಸ ನಿರೂಪಣೆಯಲ್ಲಿ ಈ ಕುರುಹು ನಿಚ್ಚಳವಾಗಿ ಗೋಚರಿಸುತ್ತದೆ. ಕಥನಗತಿಯೂ ಇದಕ್ಕೆ ಸಹಕಾರಿಯಾಗಿದೆ.

ಕುಮಾರವ್ಯಾಸ ಭಾರತದ ಶೃಂಗಾರ ಸನ್ನಿವೇಶಗಳೆನಿಸದ ಪಾಂಡು ಮಾದ್ರೀ ಪ್ರಸಂಗ, ದ್ರೌಪದೀ ಸ್ವಯಂವರ ಪ್ರಸಂಗ ಮತ್ತು ಊರ್ವಶೀ ಪ್ರಸಂಗಗಳು ಶೃಂಗಾರದ ಆಭಾಸದಂತೆ ಗೋಚರಿಸಿದರೆ ಆಶ್ಚರ್ಯವಿಲ್ಲ. ಮೂರೂ ಪ್ರಸಂಗಗಳೂ ಒಂದು ರೀತಿಯಲ್ಲಿ ದುರಂತಮಯವಾದುವು. ಈ ದುರಂತದ ತೀವ್ರತೆ ಪಾಂಡು-ಮಾದ್ರೀ ಪ್ರಸಂಗದಲ್ಲಿ ಹೆಚ್ಚು. ಪಾಂಡು ಮಾದ್ರಿಯರ ಮರಣಕ್ಕಾಗಿಯೇ ಸೃಷ್ಟಿಯಾಯಿತೇನೋ ಎನ್ನುವಂತಿದೆ ಎನಿಸುತ್ತದೆ. ಈ ಸನ್ನಿವೇಶದ ದುರಂತತೆ ಪೂರ್ವ ನಿಶ್ಚಿತವೆಂಬಂತೆ ನಡೆದು ಹೋಗುತ್ತದೆ. ಆದರೆ ಉಳಿದೆರಡು ಪ್ರಸಂಗಗಳ ದುರಂತತೆ ಅವಕ್ಕೆ ಕಾವ್ಯ ಕೊಡುವ ಅನಿರೀಕ್ಷಿತ ತಿರುವುಗಳು. ಸ್ವಯಂವರದ ವಿಚಾರ ತಿಳಿದು ಏಕಚಕ್ರನಗರದಿಂದ ಪಾಂಚಾಲದೇಶದತ್ತ ಪಾಂಡವರು ಪ್ರಯಾಣ ಬೆಳೆಸಿದಾಗಲಾಗಲಿ, ಅರ್ಜುನನ ಅನ್ವೇಷಣೆಗಾಗಿಯೇ ಎಂಬಂತೆ ದ್ರುಪದ ಸ್ವಯಂವರವನ್ನು ಏರ್ಪಡಿಸಿದಾಗಲಾಗಲಿ, ಬ್ರಾಹ್ಮಣ ವೇಷಧಾರಿ ಅರ್ಜುನ ಪಂಥವನ್ನು ಭೇದಿಸಿ ದ್ರೌಪದಿಯನ್ನು

ಗೆದ್ದುಕೊಂಡಾಗಲಾಗಲಿ ಅವಳು ಪಾಂಡವರೈವರ ಮಡದಿಯಾಗುತ್ತಾಳೆಂಬುದನ್ನು ಯಾರೂ ಊಹಿಸಲಾಗುವುದಿಲ್ಲ. ಹಾಗೆಯೇ ಊರ್ವಶೀ ಪ್ರಸಂಗದಲ್ಲಿ ಅರ್ಜುನನಿಗೆ ನಪುಂಸಕತ್ವದ ಶಾಪ ಪ್ರಾಪ್ತವಾಗುವುದು ಕೂಡ. ದ್ರೌಪದೀ ಸ್ವಯಂವರ ಪ್ರಸಂಗ ದುರಂತವೆನಿಸುವುದು ದ್ರೌಪದಿಯ ಪಂಚಪತಿತ್ವ ಬದಲಾದ ಪರಿಸ್ಥಿತಿಯ ಆಚಾರಕ್ಕೆ ವಿರುದ್ಧವಾದುದು ಎಂಬರ್ಥದಲ್ಲಿ ಮಾತ್ರ. ಆದ್ದರಿಂದ ಉಳಿದೆರಡು ಪ್ರಸಂಗಗಳಂತೆ ಇದನ್ನು ದುರಂತ ಇಲ್ಲವೆ ವಿಷಾದಾಂತ ಎನ್ನುವಾಗ ಯೋಚಿಸಬೇಕಾಗಿ ಬರುತ್ತದೆ. ಯಂತ್ರವನ್ನು ಭೇದಿಸಿದಾತ ಅರ್ಜುನ ಎಂಬುದನ್ನು ತಿಳಿದಾಗ ದ್ರುಪದನಿಗಾದ ಅಪಾರ ಸಂತೋಷ, ತನ್ನ ಮಗಳಿಗೆ ಐವರು ಗಂಡಂದಿರು ಎಂಬುದು ತಿಳಿದಾಗ ಉಳಿಯುವುದಿಲ್ಲ. ಈ ಹಂತದಲ್ಲಿ ವಿಷಾದದ ಛಾಯೆ ಆವರಿಸಿದಂತೆ ಕಾಣುವ ಸನ್ನಿವೇಶ ವ್ಯಾಸಾಗಮನದೊಡನೆ, ಆತ ಹೇಳುವ ಪೂರ್ವಭವಗಳ ಬೋಧನೆಯೊಡನೆ ತಿಳಿಗೊಂಡು ಮತ್ತೆ ಚೇತೋಹಾರಿಯಾಗುತ್ತದೆ. ಆದ್ದರಿಂದ ಈ ಸನ್ನಿವೇಶವನ್ನು ವಿಷಾದಾಂತವೆನ್ನುವುದಕ್ಕಿಂತ ಶೃಂಗಾರದ ಆಭಾಸ ಎನ್ನುವುದೇ ಸಮಂಜಸ.

### 4.2.4.2 ದ್ಯೂತ ಮತ್ತು ವಸ್ತ್ರಾಪಹರಣ

ರಾಜಸೂಯ ಯಾಗ ಸಂದರ್ಭದ ಮುಂದುವರಿಕೆಯಾಗಿ ದ್ಯೂತ ಪ್ರಸಂಗ ಜರುಗುತ್ತದೆ. ಆ ಯಾಗದ ಆಚರಣೆಯ ಸಂದರ್ಭದಲ್ಲಿ ಪಾಂಡವರು ಮೆರೆದ ಅಭ್ಯುದಯವನ್ನು ನೋಡಿದ ದುರ್ಯೋಧನನ ಹೊಟ್ಟೆಯಲ್ಲಿ ಉರಿಯೆದ್ದು ಕಣ್ಣು ಕಿಸುರಾದುದರ ಫಲ ಈ ದ್ಯೂತ ಪ್ರಸಂಗ. ಕುಮಾರವ್ಯಾಸಭಾರತದ ದ್ಯೂತ ಕ್ರೀಡೆಯ ಚಿತ್ರಣವನ್ನು ಮೂರು ಹಂತಗಳಲ್ಲಿ ವಿಂಗಡಿಸಿಕೊಂಡು ವಿವೇಚಿಸಬಹುದು. ಧೃತರಾಷ್ಟ್ರನ ಆಹ್ವಾನದ ಮೇರೆಗೆ ಹಸ್ತಿನಾವತಿಗೆ ಬಂದ ಪಾಂಡವರು ಕುರುವಂಶದ ಹಿರಿಯರಿಗೆ ಕಾಣಿಸಿಕೊಂಡುದು; ಈ ಸಮಯದಲ್ಲಿ ದುರ್ಯೋಧನ ಶಕುನಿಗಳು ಮೋಸದ ಜಾಲವನ್ನು ನಯವಾದ ಮಾತುಗಳ ಮೂಲಕ ಬೀರಿದ್ದು ಒಂದು ಹಂತ. ಧರ್ಮರಾಯನನ್ನು ನೇರವಾಗಿ ದ್ಯೂತಕ್ಕೆ ಅಹ್ವಾನಿಸಿ ಆಟಕ್ಕೆ ಬೇಕಾದ ಸಿದ್ಧತೆಗಳನ್ನು ಮಾಡಿಕೊಂಡುದು ಎರಡನೆಯ ಹಂತ. ಕ್ರೀಡೆಗೆ ಮೊದಲ್ಗೊಂಡು ಹಂತಹಂತವಾಗಿ ಧರ್ಮರಾಯನ ಸಕಲ ಸಂಪತ್ತನ್ನೂ ಕಸಿದುಕೊಂಡುದು ಮೂರನೆಯ ಹಂತ. ದ್ಯೂತ ಪ್ರಸಂಗದ ಆದಿ, ಮಧ್ಯ ಮತ್ತು ಅಂತ್ಯಗಳಲ್ಲಿ ಬರುವ ವಿದುರೋಕ್ತಿ ಪ್ರಸಂಗದ ಒಂದು ಪ್ರಮುಖ ಅಂಗವೇ ಆಗಿದೆ. ದ್ಯೂತದಲ್ಲಿ ಪಾಲ್ಗೊಂಡು ತಕ್ಷಣದ ರಂಜನೆಯಲ್ಲಿ,ಉನ್ಮತ್ತತೆಯಲ್ಲಿ ತೊಡಗಿದ್ದ ಪಾತ್ರಗಳನ್ನು ಭವಿಷ್ಯದ ಪರಿಣಾಮದತ್ತ ಸೆಳೆಯಲು ವಿದುರನ ಈ ಮಾತುಗಳು ಪ್ರಯತ್ನಿಸುತ್ತವೆ.

ವಸ್ತ್ರಾಪಹರಣ ಪ್ರಸಂಗ ಭಾರತಕಥೆಯ ಕೇಂದ್ರ ಘಟನೆ. ಪಾಂಡವರು-ಧಾರ್ತರಾಷ್ಟ್ರರ ದಾಯಾದಿ ಮಾತ್ಸರ್ಯದ ಈ ಕಥೆಯಲ್ಲಿ ಧಾರ್ತರಾಷ್ಟ್ರರು ಪಾಂಡವರ ವಿರುದ್ಧ ಸಾಧಿಸಿಕೊಂಡು ಬಂದ ದ್ವೇಷ ತನ್ನ ಗರಿಷ್ಠ ನೆಲೆಯನ್ನು ತಲುಪುತ್ತದೆ. ತಮ್ಮದೇ ಮನೆತನದ ಸೊಸೆಯ ವಸ್ತ್ರವನ್ನು ಸಭಾಮಧ್ಯದಲ್ಲಿ ಸೆಳೆದು ಅವಮಾನಿಸುವ ಕ್ರೂರ ಹಿಂಸಕ ಪ್ರವೃತ್ತಿಯನ್ನು ದುರ್ಯೋಧನ ಮತ್ತು ದುಶ್ಶಾಸನರು ತಮ್ಮ ಸಹಚರರೊಡನೆ ಇಲ್ಲಿ ಪ್ರದರ್ಶಿಸುತ್ತಾರೆ. ಹಿರಿಯರ ಮೇಲಿನ ಗೌರವ ಮತ್ತು ಅಣ್ಣನ ಧರ್ಮಯುಕ್ತ ನಡತೆಗೆ ಭಂಗ ಬರಬಾರದೆಂಬ ಕಟ್ಟುಗಳಿಂದಾಗಿ ಧಾರ್ತರಾಷ್ಟ್ರರ ಪೀಡನೆಗಳನ್ನೆಲ್ಲಾ ಸಹಿಸಿಕೊಂಡು ತಲೆಯೊಡ್ಡುತ್ತಾ ಬಂದ ಭೀಮಾರ್ಜುನ ನಕುಲಸಹದೇವರು ಮೊದಲ ಬಾರಿಗೆ ಎಲ್ಲ ಕಟ್ಟುಗಳನ್ನು ಸಡಿಲಿಸಿಕೊಂಡು ಧಾರ್ತರಾಷ್ಟ್ರರನ್ನು ವಿನಾಶ ಮಾಡುವ ಭಯಾನಕ ಪ್ರತೀಕಾರದ ಪ್ರತಿಜ್ಞೆಗಳನ್ನು ಇಲ್ಲಿ ಮಾಡುತ್ತಾರೆ. ಕಾವ್ಯದ ಮುಂದಿನ ಘಟನೆಗಳೆಲ್ಲಾ ಬಹುಮಟ್ಟಿಗೆ ಇದರ ಪ್ರತಿಫಲವೆಂಬಂತೆ ಜರುಗುತ್ತಾ ಹೋಗುತ್ತದೆ. ಈ ಎಲ್ಲ ಕಾರಣಗಳಿಂದ ವಸ್ತ್ರಾಪಹರಣ ಪ್ರಸಂಗ ಭಾರತ ಕಥೆಯ ಕೇಂದ್ರಬಿಂದು ಎಂಬುದು ಸಿದ್ಧವಾಗುತ್ತದೆ.

ದ್ಯೂತಪ್ರಕರಣವೇ ಭಾರತ ಕಾವ್ಯದ ಕೇಂದ್ರ ಘಟನೆ ಎಂದೂ, ವಸ್ತ್ರಾಪಹರಣ ಅದರ ಫಲಿತ ಎಂದೂ ವಾದಿಸಲು ಅವಕಾಶವಿದೆ. ವಸ್ತ್ರಾಪಹರಣ ದ್ಯೂತಪ್ರಕರಣದ ಫಲಿತವೆಂಬುದು ನಿಜ. ದ್ಯೂತಪ್ರಕರಣದ ಮುಂದುವರಿಕೆಯಾಗಿ ಕಥಾನಕ ತೆಗೆದುಕೊಳ್ಳುವ ಅನಿರೀಕ್ಷಿತ ಹಾಗೂ ವಿಸ್ಮಯಕಾರಕ

ತಿರುವು ವಸ್ತ್ರಾಪಹರಣ ಪ್ರಸಂಗ. ಈ ತಿರುವಿನಿಂದಾಗಿಯೇ ವಸ್ತ್ರಾಪಹರಣ ಪ್ರಸಂಗಕ್ಕೆ ಪರಿಣಾಮದ ತೀವ್ರತೆ ಮತ್ತು ರೋಚಕತೆಗಳಲ್ಲಿ ದ್ಯೂತ ಪ್ರಕರಣಕ್ಕಿಂತ ಮಿಗಿಲಾದ ಸಾಮರ್ಥ್ಯ ಒದಗಿದೆ. ಅಲ್ಲದೆ ಸರ್ವಸಂಪತ್ತನ್ನೂ, ತಮ್ಮನ್ನೂ ಕಳೆದುಕೊಳ್ಳುವುದಕ್ಕಿಂತಲೂ ಮಿಗಿಲು ತಾವು ನಂಬಿದ ಮೌಲ್ಯಗಳೆಂಬ ಅರಿವಿದ್ದುದರಿಂದಲೇ ಯುಧಿಷ್ಠಿರನ ಸಹೋದರರು ದ್ಯೂತಪ್ರಕರಣದಲ್ಲಿ ಅಣ್ಣನ ವಿರುದ್ಧ ಚಕಾರವೆತ್ತುವುದಿಲ್ಲ. ತಮ್ಮನ್ನು ಅಸಹಾಯಕ ಸ್ಥಿತಿಗೆ ದೂಡುತ್ತಿರುವ ದುರ್ಯೋಧನ ಮೊದಲಾದವರ ವಿರುದ್ಧ ಧ್ವನಿಯೆತ್ತುವುದಿಲ್ಲ. ಆದರೆ ತಮ್ಮ ಸಂರಕ್ಷಣೆಯ ಮಾನನಿಧಿಯಂತಿರುವ ದ್ರೌಪದಿಯ ಅಪಮಾನವನ್ನು ಕಣ್ಣಿಂದ ನೋಡುವ ದುರ್ದೆಸೆಯ ಮುಂದೆ ನಂಬಿದ ಮೌಲ್ಯಗಳೆಲ್ಲವೂ ತೃಣ ಮಾತ್ರವೆನಿಸಿದ್ದರಿಂದಲೇ ಇಲ್ಲಿ ಅವರು ಮಾತನಾಡುತ್ತಾರೆ. ಇಲ್ಲಿಯೂ ಅಣ್ಣನಾಜ್ಞೆ ಅಡ್ಡಿಯಾದುದರಿಂದ ಮುಂದೆ ತಕ್ಕ ಪ್ರತೀಕಾರವೆಸಗುವುದಾಗಿ ಸಂಕಲ್ಪವನ್ನು ಮಾತ್ರ ಮಾಡುತ್ತಾರೆ. ಈ ಸಂಕಲ್ಪಶಕ್ತಿ ಮುಂದಿನದನ್ನೆಲ್ಲಾ ಜರುಗಿಸುತ್ತದೆ. ದುರ್ಯೋಧನ ಇಲ್ಲಿ ತಾನು ಕಾರಣನಾದ ಅಕಾರ್ಯದಿಂದಾಗಿ ಮುಂದೆ ಸಂಭವಿಸುವ ಎಲ್ಲ ದುಷ್ಫಲಗಳಿಗೆ ತಲೆಯೊಡ್ಡುತ್ತಾ ಹೋಗುತ್ತಾನೆ. ಅಂತಿಮದಲ್ಲಿ ವಿನಾಶ ಹೊಂದುತ್ತಾನೆ. ಆದ್ದರಿಂದ ವಸ್ತ್ರಾಪಹರಣದ ಹಿಂದುಮುಂದಿನ ಘಟನೆಗಳೆಲ್ಲಾ ಅದನ್ನೇ ಕೇಂದ್ರವನ್ನಾಗಿ ಮಾಡಿಕೊಂಡುದರ ಕರ್ಷಣಶಕ್ತಿಗೆ ಒಳಪಟ್ಟು ಅದರ ಸುತ್ತಾ ಸುತ್ತುವ ಸುರುಳಿಗಳಾಗುತ್ತವೆ

### 4.2.4.3 ಉತ್ತರನ ಪ್ರಸಂಗ

ಉತ್ತರನ ಪ್ರಸಂಗ ಕುಮಾರವ್ಯಾಸಭಾರತದಲ್ಲಿ ಹಲವು ಜನ ವಿಮರ್ಶಕರ ಗಮನ ಸೆಳೆದ ಪ್ರಸಂಗ ಜನಸಾಮಾನ್ಯರೂ ಇದರಿಂದ ಬಹಳಷ್ಟು ಆಕರ್ಷಿತರಾಗಿದ್ದಾರೆ. ಈ ಪ್ರಸಂಗದಲ್ಲಿ ಪಾತ್ರದ ಮೂಲಕ ಕುಮಾರವ್ಯಾಸ ಹರಿಯಸಿದ ಹಾಸ್ಯದ ಹೊನಲು ಈ ಆಕರ್ಷಣೆಗೆ ಕಾರಣ. ಇದೊಂದು ಹಾಸ್ಯ ಪ್ರಸಂಗ ಎಂದೇ ಪ್ರಸಿದ್ಧವಾಗಿದೆ. ಕುಮಾರಾವ್ಯಾಸ ತನ್ನ ಕಾವ್ಯದ ಇನ್ನೆಷ್ಟೋ ಕಡೆ ಹಾಸ್ಯರಸದ ನಿರೂಪಣೆ ಮಾಡಿದ್ದಾನಾದರೂ ಈ ರಸ ಉತ್ತರನ ಪಾತ್ರದಲ್ಲಿ ಮಡುಗಟ್ಟಿ ನಿಂತಿದೆ. ಕುಮಾರವ್ಯಾಸನ ಹಾಸ್ಯ ಪ್ರಜ್ಞೆಯನ್ನು ಅರಿಯುವ ದೃಷ್ಟಿಯಿಂದಲೂ ಇದು ಮುಖ್ಯವಾಗುತ್ತದೆ. ಕುಮಾರವ್ಯಾಸನ ಉತ್ತರನ ಪ್ರಸಂಗ ತನ್ನಮೂಲ ರೇಖೆಗಳಲ್ಲಿ ವ್ಯಾಸಭಾರತವನ್ನೇ ಅನುಸರಿಸಿದೆ. ಆದರೆ ವಿವರಗಳಲ್ಲಿ ಭಿನ್ನವಾಗಿದೆ. ಈ ಸ್ವಾತಂತ್ರ್ಯ ಬೇರೆಡೆಗಿಂತ ಇಲ್ಲಿ ಪ್ರಖರವಾಗಿದೆ. ಗೋಗ್ರಹಣದ ವಿಷಯತಿಳಿದಾಗ ಉತ್ತರನು ಹೆಂಗಸರ ಮುಂದೆ ಗಳಹುವುದು, ಸಾರಥಿಗಾಗಿ ಕಾತರಿಸುವುದು, ಅರ್ಜುನನನ್ನು ಸಾರಥಿಯಾಗಿ ಪಡೆದು ರಣೋನ್ಮುಖನಾಗುವುದು ರಣರಂಗದಲ್ಲಿ ಕುರುಸೇನೆಯನ್ನು ನೋಡಿ ಹೆದರಿ ರಥದಿಂದಿಳಿದು ಪಲಾಯನಮಾಡುವುದು, ತಾನು ಯುದ್ಧೋನ್ಮುಖನಾಗಿ ಕಾತರಿಸುವುದು ಅರ್ಜುನ ಅವನನ್ನು ಬೆನ್ನಟ್ಟಿ ಹಿಡಿದು ಧೈರ್ಯ ತುಂಬಿ ಅವನನ್ನೇ ಸಾರಥಿಯನ್ನಾಗಿ ಮಾಡಿಕೊಂಡು ತಾನು ಯುದ್ಧೋನ್ಮುಖನಾಗಿ ಹೊರಡುವುದು -ಇವೆಲ್ಲವೂ ಮೂಲದಲ್ಲಿ ಒಂದು ಮಿತಿಯಲ್ಲಿ ಗಂಭೀರವಾಗಿಯೇ ಬಂದಿದೆ. ಹಾಸ್ಯದ ಸೂಚನೆಗಳು ಅಲ್ಲಿ ಒಂದೆರಡು ಕಡೆ ಮಿಂಚಿದರೂ ಪ್ರಸಂಗ ಗಾಂಭೀರ್ಯದ ಕಟ್ಟನ್ನು ಕಡಿದುಕೊಳ್ಳುವುದಿಲ್ಲ. ಕೊನೆಕೊನೆಗೆ ಉತ್ತರ ತಾನು ಭಯವನ್ನು ಬಿಟ್ಟುದಾಗಿಯೂ ಅರ್ಜುನನ ಮುಖಂಡತ್ವದಲ್ಲಿ ಯಾರೊಡನೆ ಬೇಕಾದರೂ ಯುದ್ಧ ಮಾಡಲು ಸಿದ್ಧನಿರವುದಾಗಿಯೂ ಹೇಳಿಕೊಳ್ಳುತ್ತಾನೆ. ವ್ಯಾಸರ ಉತ್ತರನಲ್ಲಾದ ಈ ಬೆಳವಣಿಗೆ ಸನ್ನಿವೇಶಕ್ಕೆ ಅರ್ಥವಂತಿಕೆಯನ್ನು ತರುತ್ತದೆ. ಕುಮಾರವ್ಯಾಸನ ಉತ್ತರ ಈ ರೀತಿಯ ಬೆಳವಣಿಗೆಯನ್ನು ತೋರಿಸುವುದಿಲ್ಲ ಎಂಬುದನ್ನು ಲಕ್ಷಿಸಬೇಕು.

ಕುಮಾರವ್ಯಾಸ ಭಾರತದ ಕಥನ ಚೌಕಟ್ಟಿನಲ್ಲಿ ಉತ್ತರನ ಪ್ರಸಂಗ ಸಂವಿಧಾನಾತ್ಮಕ ನೈಪುಣ್ಯತೆಯನ್ನು ತೋರಿಸುವಂತಹುದೂ, ಆ ಮೂಲಕ ಕೃತಿಗೆ ಕಲಾತ್ಮಕ ಮೆರುಗನ್ನು ಕೊಡುವಂತಹದೂ ಆಗಿದೆ. ವ್ಯಾಸ ಭಾರತದ ಕಥಾಸಾಗರದಲ್ಲಿ ಗುಪ್ತಗಾಮಿಸಿಯಂತೆ ಈ ಪ್ರಸಂಗ ಗಾಂಭೀರ್ಯವನ್ನೂ ಮೈಗೂಡಿಸಿಕೊಂಡು ಸಾಗಿಹೋಗುತ್ತದೆ. ಕುಮಾರವ್ಯಾಸ ಆ ಗುಪ್ತಗಾಮಿನಿಯನ್ನು ಬಹಿರಂಗಗೊಳಿಸುವ ದಡಗಳನ್ನು ಕಲ್ಪಿಸಿದ್ದಾನೆ. ಆದರೆ ಉತ್ತರಕುಮಾರನ ಪಾತ್ರ ಹಾಗೂ ಪ್ರಸಂಗಗಳು ಅಲ್ಲಿ ಎಷ್ಟೋ

ಇವೆ. ಜೊತೆಗೆ ಹಾಸ್ಯರಸಕ್ಕೆ ತನ್ನದೇ ಸ್ಥಾನವಿರುವುದು ನಿಜವಾದರೂ, ಉಳಿದ ರಸಗಳ ಜೊತೆ ನಿಲ್ಲಿಸಿದಾಗ ಅದಕ್ಕೆ ಅದ್ವಿತೀಯ ಸ್ಥಾನವೇನೂ ಲಭ್ಯವಾಗುವುದಿಲ್ಲ.

## 4.2.5 ಕೃತಿಯ ಭಾಷೆ ಶೈಲಿ

ಕವಿಯ ಜೀವನಾನುಭವ ಮತ್ತು ಚಿಂತನೆ ಉನ್ನತಿಯನ್ನು ಹೊಂದಿದಂತೆ ಕಾವ್ಯದ ಭಾಷೆಯೂ ಉನ್ನತಿಯನ್ನು ಪಡೆಯುತ್ತದೆ. ಅತ್ಯುನ್ನದ ತತ್ವವನ್ನೂ ಕಲೆಯಾಗಿಸಲು ಉನ್ನತ ಮಟ್ಟದ ಭಾಷೆ ಅಗತ್ಯ. ಮಹಾಕವಿ ಪ್ರತಿಭೆಯು ಲೇಖಕನ ಕೈಯಲ್ಲಿ ಒಂದು ಭಾಷೆ ನಿಜವಾಗಿಯೂ ಔನ್ನತ್ಯವನ್ನು ಪರಿಪೂರ್ಣತೆಯನ್ನು ಸಾಧಿಸುತ್ತದೆ. ಇಂತಹ ಒಬ್ಬ ಲೇಖಕ ತಾನು ದುಡಿಸಿಕೊಳ್ಳುವ ಭಾಷೆ ತನ್ನ ಗಂಭೀರ ಸ್ವರೂಪದ ನಡುವೆಯೇ ಹಾಸ್ಯದ ಮತ್ತು ಗ್ರಾಮ್ಯತೆಯ ಸೊಗಡನ್ನೂ ಸಾಧಿಸಬಲ್ಲದಾಗಿದ್ದರೆ ಅದು ಆ ಲೇಖನದ ವ್ಯಕ್ತಿತ್ವದ ವಿಶಿಷ್ಟತೆಯ ಸೂಚಕ. ಕುಮಾರವ್ಯಾಸನ ಭಾಷೆ ಇಂತಹ ವಿಶಿಷ್ಟ ನೆಲೆಯದು. ಅವನ ವ್ಯಕ್ತಿತ್ವ ಕನ್ನಡದ ಇತರ ಪ್ರಾಚೀನ ಕವಿಗಳಲ್ಲಿ ಕಾಣಸಿಗದ ವಿಶೇಷತೆಯಿಂದ ಕೂಡಿದೆ. ಆತನಿಗೆ ಕನ್ನಡದ ಶಿಷ್ಟತೆ ಮತ್ತು ಗ್ರಾಮ್ಯತೆಗಳೆರಡರ ಮರ್ಮವೂ ಗೊತ್ತು. ಎಷ್ಟು ಗಂಭೀರವಾಗಿ ಬರೆಯಬಲ್ಲನೊ ಅಷ್ಟೇ ಹಾಸ್ಯವಾಗಿಯೂ ಬರೆಯಬಲ್ಲ. ಸಂಸ್ಕೃತ ಭೂಯಿಷ್ಠವಾದ ಪ್ರೌಢತೆಯೂ ಅಚ್ಚಗನ್ನಡದ ಸರಳತೆಯೂ ಅವನಲ್ಲಿದೆ. ಕನ್ನಡ ಪದದ ಧಾಟಿ ಅವನಿಗೆ ಕರಗತವಾಗಿದೆ. ಇಷ್ಟರ ಜೊತೆಗೆ ಮರಾಠಿಯ ಸಂಪರ್ಕ |ಬೇರೆ.

ಕುಮಾರವ್ಯಾಸನದು ದೇಶೀ ಛಂದೋ ಪ್ರಕಾರಗಳಲ್ಲಿ ಒಂದಾದ ಭಾಮಿನಿಷಟ್ಪದಿಯ ಮೂಲಕ ನಡುಗನ್ನಡ ಭಾಷೆಯಲ್ಲಿ ನಿರೂಪಿತವಾದ ಕಾವ್ಯ. ಈ ಕಾವ್ಯ ಮಾರ್ಗವಿಧಾನವನ್ನು ತೊರೆದು ದೇಶೀಮಯವಾಗುವುದಕ್ಕೆ ಕಾವ್ಯ ಸೃಷ್ಟಿಯ ಬಗೆಗಿನ ಬದಲಾದ ತಾತ್ವಿಕ ಧೋರಣೆಯಷ್ಟೆ ಕಾರಣವಾಗದೆ ಮಧ್ಯಕಾಲೀನ ಅವಧಿಯ ಕನ್ನಡ ಭಾಷಾ ಸ್ಥಿತಿಯೂ ಕಾರಣವಾಗಿದೆ. ನಡುಗನ್ನಡ ಭಾಷಾಸ್ಥಿತಿ ಆ ಕಾಲದ ಕಾವ್ಯದೃಷ್ಟಿಯೊಡನೆ ಮೇಳೈಸಿ ಕುಮಾರವ್ಯಾಸನನ್ನು ಜನಸಾಮಾನ್ಯರ ನೆಲೆಗೆ ಒಯ್ದಿತು ಎಂದು ಹೇಳುವುದು ಸೂಕ್ತ. ಸಮಕಾಲೀನ ಭಾಷೆಯ ಸೊಗಡು, ಮಾತಿನ ಚಮತ್ಕೃತಿಗಳನ್ನು ಕುಮಾರವ್ಯಾಸ ಎಷ್ಟು ಎಚ್ಚರಿಕೆಯಿಂದ ಗಮನಿಸಿದ್ದಾನೆ, ಕಾವ್ಯದಲ್ಲಿ ಅವನ್ನು ಎಷ್ಟು ಕಲಾತ್ಮಕವಾಗಿ ದುಡಿಸಿಕೊಳ್ಳುತ್ತಾನೆ ಎಂಬುದಕ್ಕೆ ಒಂದು ಉದಾಹರಣೆ:

ಮರುಳ ಕಣ್ಣಿಗೆ ಕೊಡವ ತೋರದ
ಲಿರದ ಸಾಸವೆ ನಿಮ್ಮ ಕಣ್ಣಿಗೆ
ನರನು ದೊಡ್ಡಿತು ಉಳಿದ ವೀರನ ಕಣ್ಗೆ ತುಸುಮಾತ್ರ
ಮರಳು ಹಾರುವ ಗದ್ಯ ಪದ್ಯದ
ಸರಸ ವಿದ್ಯಗಲ್ಲದೀ ಸಂ
ಗರದ ಕರ್ಕಶ ವಿದ್ಯೆ ನಿಮಗೇಕೆಂದನಾ ಕರ್ಣ (ವಿ ಪ : ೭ : ೧೧)

ಇಂತಹ ಬರವಣಿಗೆಗೆ 'ಕರ್ಣಾಟ ಭಾರತ ಕಥಾಮಂಜರಿ'ಯಲ್ಲಿ ಹುಡುಕಬೇಕಿಲ್ಲ. ಕೃಪಾಚಾರ್ಯನನ್ನು ಮೂದಲಿಸಲು ಕರ್ಣನಿಂದ ಆಡಿಸಿದ ಈ ಮಾತು ಜನ ಸಾಮಾನ್ಯರ ಆಡು ಮಾತಿನ ಧಾಟಿಯಲ್ಲಿದೆ. ಮೂರು-ನಾಲ್ಕು ಮಾತ್ರೆಯ ಭಾಮಿನೀ ಷಟ್ಪದಿಯ ನಿಯತ ಲಯ ಕೂಡ ಚೆಲ್ಲವರಿದಿದೆ. ಇಂತಹ ಮಾತಿನ ವರಸೆ ಕುಮಾರವ್ಯಾಸನ ದೇಸಿಯ ಲಕ್ಷಣವನ್ನು ಸಾರುವ ಒಂದಂಶ. ಅವನ ಈ ದೇಸಿಯಲ್ಲಿ ಕೊನೆಗಾಣದ ವೈವಿಧ್ಯವಿದೆ. ಜೀವಂತಿಕೆಯಿದೆ; ಕನ್ನಡವನ್ನು ಅವನು ಅತ್ಯಂತ

ಸಹಜ ಸಲೀಲವಾಗಿ, ವೀರ್ಯವತ್ತಾಗಿ ಪ್ರಯೋಗಿಸುತ್ತಾನೆ. ಈ ಅವಧೂತ ಚೇತನಕ್ಕೆ ಮಡಿ ಮೈಲಿಗೆಯೆಂಬ ಭೇದವಿಲ್ಲ, ಅದು ಸಮದರ್ಶಿ. ಒರಟು, ಅಸಭ್ಯ, ಅಶ್ಲೀಲ ಎನಿಸುವ ಮಾತುಗಳನ್ನೂ ಕುಮಾರವ್ಯಾಸ ಔಚಿತ್ಯಪೂರ್ಣವಾಗಿ, ವಿಶಿಷ್ಟ ಪರಿಣಾಮಕಾರಿಯಾಗಿ ಬಳಸಿಕೊಳ್ಳುತ್ತಾನೆ. ಅವನ ಪಾತ್ರಗಳ ಸಜೀವತೆಗೆ ಈ ಭಾಷೆಯ ಕೊಡುಗೆ ಅಪ್ರಿಷ್ಟಲ್ಲ.

ದೇಸಿಯ ವೈಶಿಷ್ಟ್ಯದಿಂದ ಕುಮಾರವ್ಯಾಸನ ಭಾಷೆಗೆ ಕಸುವು ಮೂಡಿರುವುದು ನಿಜ. ಆದರೆ ಕಾವ್ಯದ ಉದ್ದಕ್ಕೂ ಈ ಕಸುವು ನಿರ್ಭಿಡತೆಯಾಗಿ ವ್ಯಾಪಿಸಿದೆ ಎಂದು ಭಾವಿಸಬೇಕಾಗಿಲ್ಲ. ಈಗಾಗಲೇ ಹೇಳಿರುವಂತೆ ಕುಮಾರವ್ಯಾಸ ಸಂಸ್ಕೃತದ ಮೇಲೆ ಹೊಂದಿರುವ ಹಿಡಿತವನ್ನು ಸಾಬೀತುಪಡಿಸುವಂತಹ ರಚನೆಗಳೂ ಅಲ್ಲಲ್ಲಿ ಸಿಕ್ಕುತ್ತವೆ. ಕುಮಾರವ್ಯಾಸನಿಗೆ ಎಷ್ಟೋ ವರ್ಷಗಳ ಮೊದಲು ಐತಿಹಾಸಿಕ ಕಾರಣಗಳಿಂದಾಗಿ ಕನ್ನಡಕ್ಕೆ ಮರಾಠಿಯ ಸಂಪರ್ಕವುಂಟಾಗಿ ಜನರ ಆಡಿಕೆಯಲ್ಲಿ ಮರಾಠಿ ಶಬ್ದಗಳು ಸೇರಿಹೋದುದು ಕುಮಾರವ್ಯಾಸ ಭಾರತದ ಶಬ್ದಲೋಕದ ಶ್ರೀಮಂತಿಕೆಯನ್ನು ಹೆಚ್ಚಿಸಿದ್ದುದು, ಕುಮಾರವ್ಯಾಸನ ಭಾಷೆಯ ವಿಶಿಷ್ಟಾಂಶಗಳಲ್ಲಿ ಒಂದನ್ನಾಗಿಸಿದೆ. ಅವನದು ಮುಖ್ಯವಾಗಿ ರೂಪಕನಿಷ್ಠ ಬರವಣಿಗೆ. ರೂಪಕಗಳನ್ನು ರಚಿಸುವುದೆಂದರೆ ಅವನಿಗೆ ನೀರು ಕುಡಿದಷ್ಟು ಸುಲಭ.

---

### 4.2.6 ಕೃತಿಯ ಮಹತ್ವ

---

'ಮಹಾಕಾವ್ಯ' ಎಂಬುದು ಗಾತ್ರದಲ್ಲೂ, ವಸ್ತು ವಿಸ್ತಾರದಲ್ಲೂ, ಸತ್ವದಲ್ಲೂ ಮಹತ್ತಾದುದನ್ನು ಸಾಧಿಸುವ ಒಂದು ಕಾವ್ಯ ಪ್ರಕಾರ. ಜೀವನದರ್ಶನವೂ ಸೇರಿದಂತೆ ಈ ಮೂರರಲ್ಲೂ ಇದು ಸಾಧಿಸುವ ಬೀಸು ಮತ್ತು ಎತ್ತರ ಬೇರೆ ಯಾವ ಸಾಹಿತ್ಯ ಪ್ರಕಾರಕ್ಕೂ ಇರಲಾರದು. ಕುಮಾರವ್ಯಾಸ ಭಾರತ ಇಂತಹ ಸಾಧನೆಯನ್ನು ಮಾಡಿರುವ ಒಂದು ಮಹಾಕಾವ್ಯ. ಭಾರತೀಯ ಪರಂಪರೆಗನುಗುಣವಾಗಿ ಸಂಸ್ಕೃತದ ಮಹಾಕಾವ್ಯವೊಂದನ್ನು ಆಕರವಾಗಿಟ್ಟುಕೊಂಡು ಪ್ರಾಂತೀಯ ಭಾಷೆಯಲ್ಲಿ ಸೃಷ್ಟಿಯಾದ ಮಹಾಕಾವ್ಯ. ಅಭಿಜಾತತೆಯ ಮಾರ್ಗದಲ್ಲಿದ್ದ ಕನ್ನಡ ಕಾವ್ಯದ ಸಮಗ್ರತೆ ಅವನೊಬ್ಬನಲ್ಲಿ ಮಾತ್ರ ದೊರೆಯುವಂಥದು. ಸಾವಿರಾರು ವರ್ಷಗಳಿಂದ ಬೆಳೆದು ಬಂದಿರುವ ಕನ್ನಡ ಕಾವ್ಯ ಸಿದ್ಧಿಯ ಚರಮ ಸೀಮೆಯನ್ನು ಕುಮಾರವ್ಯಾಸನಂತಹ ಕವಿಗಳಲ್ಲಿ ಮಾತ್ರ ಗುರುತಿಸಬಹುದೆಂದರೆ ಅತಿಶಯೋಕ್ತಿಯಾಗಲಾರದು. ವಿರುದ್ಧ ಭಾವಗಳ ಸಂಘರ್ಷ, ಸಂಘರ್ಷದಿಂದಾಗಿ ಮೌಲ್ಯಸ್ವೀಕಾರಕ್ಕೆ ಸಂಬಂಧಿಸಿದಂತೆ ತಲೆದೋರುವ ಸಮಸ್ಯೆ, ಸಮಸ್ಯೆಯನ್ನು ಬಿಡಿಸಿ ಮೌಲ್ಯ ಪ್ರತಿಷ್ಠಾಪನೆಗಾಗಿ ಹೆಗಲುಕೊಟ್ಟು ನಿಲ್ಲುವ ನೇತಾರ -ಇವು ಉದಾತ್ತ ಕಾವ್ಯದಲ್ಲಿ ಬರುವ ಸಾಮಾನ್ಯ ಸಂಗತಿಗಳು. ಕುಮಾರವ್ಯಾಸ ಭಾರತದಲ್ಲಿ ಇವೆಲ್ಲವೂ ಇರುವುದರಿಂದ ಅದೊಂದು ಮಹಾಕಾವ್ಯವಾಗಿ ತನ್ನ ನೆಲೆಯನ್ನು ಸ್ಥಾಪಿಸಿಕೊಳ್ಳುತ್ತದೆ.

ಕುಮಾರವ್ಯಾಸ ಎಲ್ಲ ಕಾಲಕ್ಕೂ ಕನ್ನಡ ಸಾಹಿತ್ಯ ಲೋಕದಲ್ಲಿ ಶಾಶ್ವತವಾಗಿ ಉಳಿಯುವ ಒಬ್ಬ ಮಹಾಕವಿ. ಪುರಾಣ ಜಗತ್ತೊಂದನ್ನು ತನ್ನ ಸಮಕಾಲೀನ ಬದುಕಿನೊಡನೆ ಬೆಸೆಯುವ, ಕಲಾಕೃತಿಯೊಂದರ ಮೂಲಕ ಒಂದು ವಿಶಿಷ್ಟ ಸಾಂಸ್ಕೃತಿಕ ಬದುಕನ್ನು ಕಟ್ಟಿಕೊಡುವ ಕೆಲಸವನ್ನು ಅವನು ಸಮರ್ಥವಾಗಿ ಮಾಡಿದ್ದಾನೆ. ಮಹಾಕವಿಯೊಬ್ಬನಿಗೆ ಸಾಧ್ಯವಾಗುವಂತಹ ಕಾವ್ಯ ಪರಂಪರೆಯೊಂದನ್ನು ಅವನು ಕನ್ನಡದಲ್ಲಿ ಹುಟ್ಟುಹಾಕಿದ್ದಾನೆ. ಎಲ್ಲಕ್ಕಿಂತ ಹೆಚ್ಚಾಗಿ ಅವನ ಕಾವ್ಯ ಒಳಗೊಂಡಿರುವ ಒಂದು ವಿಭಿನ್ನ ಮಾನವ ಪ್ರಪಂಚ ಮತ್ತು ಆ ಪ್ರಪಂಚದೊಳಗೆ ಲೀಲಾಜಾಲವಾಗಿ ಕೈಯಾಡಿಸುವ ದೈವೀಪ್ರಭಾವ, ಇವೆರಡರ ಹೊಂದಿಕೆಯ ಫಲವಾಗಿ ರೂಪಿತವಾಗುವ ಜೀವನ ದೃಷ್ಟಿ ಇವು 'ಕರ್ಣಾಟ ಭಾರತ ಕಥಾಮಂಜರಿ' ತನ್ನ ಸ್ಥಾನವನ್ನು ಚ್ಯುತಿ ಬರದಂತೆ ಉಳಿಸಿಕೊಳ್ಳುತ್ತದೆ. ಯುಗ ಪ್ರವರ್ತಕನೆಂಬ ಅಗ್ಗಳಿಕೆಯನ್ನು ಕುಮಾರವ್ಯಾಸನಿಗೆ ಉಳಿಸಿಕೊಡುತ್ತದೆ.

## 4.3 ಚಾಮರಸ

ಮಧ್ಯಕಾಲೀನ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಚಾಮರಸನೆಂಬ ಹೆಸರಿನ ಕವಿಯಿದ್ದನೆಂದೂ, ಆತ 'ಪ್ರಭುಲಿಂಗಲೀಲೆ'ಯ ಕರ್ತೃವೆಂದೂ ಪ್ರಮಾಣಾಂತರಗಳಿಂದ ತಿಳಿದುಬರುತ್ತದೆ. 'ಪ್ರಭುಲಿಂಗಲೀಲೆ'ಯ ಆರಂಭದಲ್ಲಾಗಲಿ ಮುಕ್ತಾಯದಲ್ಲಾಗಲಿ ಕವಿ ಪ್ರಸ್ತಾಪದ ಸಂದರ್ಭ ಬಂದಾಗ ಕವಿ ತನ್ನ ಹೆಸರು, ಕಾಲ, ತಂದೆ-ತಾಯಿ, ಗುರುಪರಂಪರೆ, ಆಶ್ರಯ ಇತ್ಯಾದಿಗಳ ಬಗೆಗೆ ಏನನ್ನೂ ಹೇಳಿಲ್ಲ. ಆದರೆ ಗ್ರಂಥದ ಕೆಲವು ಓಲೆಗರಿ ಪ್ರತಿಗಳ ಮೊದಲ ಪದ್ಯಗಳಲ್ಲಿ 'ನಿಖಿಳಾಗಮ ನಿಪುಣಂ ಸುನಾಮ ಸೀಮಂ ಚಾಮಂ' ಎಂದೂ, "ನಾನೊರೆವೆನಿಳೆಗೆ ವಸ್ತುಕದಿಂದಂ" ಎಂದೂ ಇರುವುದನ್ನೂ ಗಮನಿಸಿ ವಿದ್ವಾಂಸರು ಕವಿ ಇಲ್ಲಿ ತನ್ನ ಹೆಸರನ್ನು ಸೂಚಿಸಿದ್ದಾನೆಂದು ತಿಳಿಸಿದ್ದಾರೆ. ಈ ಉಲ್ಲೇಖದಿಂದಲೂ, ಅನ್ಯ ಪ್ರಮಾಣಗಳಿಂದಲೂ ದೊರೆಯುವ ಸೂಚನೆಗಳ ಮೇರೆಗೆ ಪ್ರಭುಲಿಂಗಲೀಲೆಯ ಕರ್ತೃ ಚಾಮರಸ ಎಂದು ತಿಳಿದು ಮುಂದಿನ ವಿಚಾರಗಳಿಗೆ ತೊಡಗೋಣ.

ಎರಡು ಕಾರಣಗಳಿಗಾಗಿ ಚಾಮರಸನ ಕಾಲವನ್ನು ಕುರಿತ ಚರ್ಚೆ ಎಳೆದಾಡಿದೆ ಎಂಬುದನ್ನು ಬಿಟ್ಟರೆ, ಅವನ ಕಾಲ ವಿಚಾರ ಹೆಚ್ಚಿನ ಚರ್ಚೆಗಳೇನೂ ಇಲ್ಲದೆ ನಿರ್ಣಯದ ಹಂತ ತಲುಪಿದೆ. ಚಾಮರಸ ಸ್ವವಿಚಾರವೇನನ್ನೂ ಕೃತಿಯಲ್ಲಿ ಹೇಳದಿರುವುದು ಒಂದು ಮತ್ತು ಇನ್ನೊಂದು ಚಾಮರಸನಿಗೂ ಕುಮಾರವ್ಯಾಸನಿಗೂ ಸಂಬಂಧ ಕಲ್ಪಿಸುವ ಮತ್ತು ಕುಮಾರವ್ಯಾಸ ಹರಿಹರ ಮತ್ತು ರಾಘವಾಂಕರ ಸಮಕಾಲೀನನೆಂದು ತಿಳಿಸುವ ಕಥೆಗಳು ವೀರಶೈವ ಕಾವ್ಯಗಳಲ್ಲಿ ಉಲ್ಲೇಖವಾಗಿರುವುದು. ಈ ಎರಡು ಕಾರಣಗಳಿಂದ ಚಾಮರಸನ ಕಾಲವನ್ನು ಕುರಿತಾದ ಚರ್ಚೆ ಸ್ವಲ್ಪ ಮಟ್ಟಿನ ಎಳೆದಾಟಕ್ಕೆ ಗುರಿಯಾಗಿದೆ. ಕಥೆಗೆ ಪ್ರಮಾಣಬದ್ಧತೆಯನ್ನು ತಿರಸ್ಕರಿಸಲಾಗಿದೆ. ಉಳಿದ ಪ್ರಮಾಣಗಳ ಪರಿಶೀಲನೆಯಿಂದ ಡಾ. ಕಿಟ್ಟಲ್ ಸುಮಾರು ೧೪೬೦ ಎಂದೂ, ಆರ್. ನರಸಿಂಹಾಚಾರ್ಯ ಮತ್ತು ಇ.ಪಿ. ರೈಸ್ ಅವರು ಸುಮಾರು ೧೪೩೦ ಎಂದೂ ಚಾಮರಸನ ಕಾಲವನ್ನು ಹೇಳಿದ್ದಾರೆ. ಕ್ರಿ.ಶ. ೧೪೧೯ರಿಂದ ೧೪೪೬ ರವರೆಗೆ ಆಳಿದ ಪ್ರೌಢದೇವರಾಯನ ಕಾಲದಲ್ಲಿದ್ದ ನೂರೊಂದು ವಿರಕ್ತರಲ್ಲಿ ಚಾಮರಸನೂ ಒಬ್ಬನಾಗಿದ್ದನೆಂದು ತಿಳಿದುಬಂದಿರುವುದರಿಂದ ಅವನ ಕಾಲವು ಸುಮಾರು ೧೪೩೦ ಎಂಬುದೇ ಹೆಚ್ಚು ಸಮ್ಮತವಾಗಿದೆ. ಶಿ.ಬಸವನಾಳ, ಎಂ.ಆರ್.ಶ್ರೀನಿವಾಸಮೂರ್ತಿ ಮತ್ತು ಆರ್. ಸಿ. ಹಿರೇಮಠ ಇವರು ಇದನ್ನೇ ಒಪ್ಪಿದ್ದಾರೆ.

### 4.3.1 ದೇಶ

ಚಾಮರಸನು ನಾಗಣಪುರದವನೆಂದು ಪ್ರಭುದೇವರ ಸಾಂಗತ್ಯದಲ್ಲಿ ಹೇಳಿದೆ; ಗದುಗಿನವನೆಂದು ಗುರುರಾಜ ಚಾರಿತ್ರ, ಚೋರಬಸವ ಚರಿತ್ರೆ ಮುಂತಾದವುಗಳಲ್ಲಿ ಹೇಳಿದೆ. ಪ್ರೌಢರಾಯನ ಕಾವ್ಯ, ಭೈರವೇಶ್ವರನ ಕಾವ್ಯಕಥಾಸೂತ್ರ, ರತ್ನಾಕರಗಳಿಂದ ಆತನು ವಿಜಯನಗರದ ಪ್ರೌಢದೇವರಾಯನ ಆಸ್ಥಾನದಲ್ಲಿದ್ದನೆಂದು ತಿಳಿದುಬಂದಿರುತ್ತದೆ. ನೂರೊಂದು ವಿರಕ್ತರಿಗೆ ಶಂಕರಾಚಾರ್ಯ ಸ್ವಾಮಿಗಳೆಂಬುವರು ಷಟ್ಸ್ಥಲ ಜ್ಞಾನೋಪದೇಶ ಮಾಡಿದಂತೆ ಸಾಕ್ಷ್ಯಗಳಿವೆ. ಆದರೆ ರಾಘವಾಂಕರ ಕಾವ್ಯ ಚೋರಬಸವ ಚರಿತ್ರಾದಿಗಳ ಪ್ರಕಾರ ಉದ್ಭಾನಿಯ ವೀರೇಶನೇ ಲಿಂಗದಿಂದ ಮೂಡಿ ಬಂದು ಉಪದೇಶ ಮಾಡಿ ಗುರುವಾದಂತೆ ಕಥೆಯಿದೆ. "ಅನ್ಯಮತ ಕೋಲಾಹಲ", 'ವೀರಶೈವಾಚಾರಮಾರ್ಗ ಸಾರೋದ್ಧಾರ' ಎಂಬ ಬಿರುದುಗಳಿಂದ ಸಿದ್ಧನಂಜೇಶನು ಚಾಮರಸನನ್ನು ಹೊಗಳಿದ್ದಾನೆ. ಇದರಿಂದಲೂ, ಚಾಮರಸ ಅಲ್ಲಮಪ್ರಭುವನ್ನು ಕುರಿತು ಕಾವ್ಯ ಬರೆದಿರುವುದರಿಂದಲೂ ಆತ ವೀರಶೈವನೆಂಬುದು ತಿಳಿಯುತ್ತದೆ. 'ಚಾಮರಸನು ಜನ್ಮತಃ ವೀರಶೈವ'ಎಂಬುದು ಎಂ.ಆರ್. ಶ್ರೀ ಅವರ ಅಭಿಪ್ರಾಯ. ಚಾಮರಸನು ಉನ್ನತ ಸ್ಥಾನ ಮಾನ ಪಡೆದಿದ್ದನೆಂದೂ, ಪಂಥದ ಮೇಲೆ 'ಪ್ರಭುಲಿಂಗಲೀಲೆ'ಯನ್ನು ಬರೆದ ಮೇಲೆ ಜಕ್ಕಣಾಚಾರ್ಯ ಅದರ ಅರ್ಥವಿವರಣೆ ಮಾಡಿದನೆಂದೂ ಪ್ರೌಢದೇವರಾಯ ಅದನ್ನು ಮೆಚ್ಚಿಕೊಂಡನೆಂದೂ, ಅನಂತರ ಜಕ್ಕಣಾರ್ಯ ಮಂತ್ರಿಪದವಿಯಿಂದ ನಿವೃತ್ತನಾಗಿ ಅದು ಚಾಮರಸನಿಗೆ

ಸಿಗುವಂತೆ ಮಾಡಿದನೆಂದೂ ಪ್ರೌಢರಾಯನ ಕಾವ್ಯದಲ್ಲಿ ಹೇಳಲಾಗಿದೆ. ಇದಕ್ಕೆಲ್ಲಾ ಬೇರೆ ತಕ್ಕ ಆಧಾರಗಳಿಲ್ಲ. ಚಾಮರಸ ನಾಗಣಾಪುರ ಅಥವಾ ಗದುಗಿನವನಾಗಿದ್ದು ಪ್ರೌಢ ದೇವರಾಯನ ಆಸ್ಥಾನದ ಮನ್ನಣೆ ಪಡೆದ ವಿರಕ್ತನಾಗಿದ್ದನೆಂಬ ಅಂಶವನ್ನು ಬಹುಶಃ ಒಪ್ಪಬಹುದೆಂದು ತೋರುತ್ತದೆ.

---

## 4.3.2 ಕೃತಿಗಳು

---

ಚಾಮರಸ 'ಪ್ರಭುಲಿಂಗಲೀಲೆ'ಯಲ್ಲದೆ ಬೇರೆ ಕೃತಿಗಳನ್ನು ಬರೆದ ಬಗೆಗೆ ಯಾವ ಸಾಕ್ಷ್ಯಗಳೂ ಇಲ್ಲ. ಪ್ರಭುಲಿಂಗಲೀಲೆಯು ಮೊದಲು ಹೇಳಿದ ಒಂದು ಉಲ್ಲೇಖವನ್ನು ಬಿಟ್ಟರೆ ತನ್ನ ಕರ್ತೃವಿನ ಬಗೆಗೆ ಏನನ್ನೂ ಹೇಳುವುದಿಲ್ಲ. ಆದರೂ 'ಪ್ರಭುಲಿಂಗಲೀಲೆ'ಯ ಕರ್ತೃ ಚಾಮರಸನೆಂಬುದು ಪ್ರಕಾರಾಂತರಗಳಿಂದ ದೃಢಪಡುತ್ತದೆ. ಕನ್ನಡ ಕವಿಗಳಾದ ಅದೃಶ್ಯ ಕವಿ, ಸಿದ್ಧನಂಜೇಶ, ಶಾಂತಲಿಂಗದೇಸಿಕ ಮುಂತಾದವರು ಈ ವಿಷಯವನ್ನು ಸ್ಪಷ್ಟವಾಗಿ ಹೇಳಿದ್ದಾರೆ. ಅನೇಕ ವೀರಶೈವ ಕವಿಗಳು ಪೂರ್ವ ಕವಿ ಸ್ಮರಣೆಯ ಸಂದರ್ಭದಲ್ಲಿ ಚಾಮರಸನ ಹೆಸರನ್ನೂ ಹೇಳಿದ್ದಾರೆ. ಪಿಡುಪರ್ತಿ ಸೋಮನಾಥ, ಪಿಡುಪರ್ತಿ ಬಸವ ಕವಿ ಎಂಬ ತೆಲುಗಿನ ಕವಿಗಳು ಕನ್ನಡದ ಪ್ರಭುಲಿಂಗಲೀಲೆಯನ್ನು ಚಾಮರಸ ಬರೆದನೆಂದೂ ಅದನ್ನು ತಾವು ತೆಲುಗಿನಲ್ಲಿ ಬರೆದೆವೆಂದೂ ಹೇಳಿದ್ದಾರೆ. ಈ ಪ್ರಮಾಣಗಳಿಂದ 'ಪ್ರಭುಲಿಂಗಲೀಲೆ' ಚಾಮರಸ ಬರೆದ ಕೃತಿ ಎಂದು ನಿರ್ಧರಿಸಬಹುದಾಗಿದೆ.

---

## 4.3.3 ಆಕರ

---

ಅಲ್ಲಮ ಪ್ರಭುವಿನ ಜೀವನ ಕಥೆಯನ್ನು ಆಧರಿಸಿ ರಚನೆಯಾದ ಪ್ರಭುಲಿಂಗಲೀಲೆ ಯಾವುದೇ ಒಂದು ನಿರ್ದಿಷ್ಟ ಆಕರವನ್ನು ಅನುಸರಿಸಿದಂತೆ ಕಾಣುವುದಿಲ್ಲ. ಆದರೆ ತನಗಿಂತ ಮೊದಲು ಅಲ್ಲಮನನ್ನು ಕುರಿತು ರಚನೆಯಾಗಿದ್ದ ಕಾವ್ಯಗಳನ್ನು ಅವನು ಗಮನಿಸಿರುವುದು ಸಾಧ್ಯ. ಅಲ್ಲಮಪ್ರಭುವಿನ ಚರಿತ್ರೆಯನ್ನು ಮೊದಲು ಬರೆದವನು ಹರಿಹರ. ಅವನ 'ಪ್ರಭುದೇವರ ರಗಳೆ' ಹಾಗೂ ಚಾಮರಸನ 'ಪ್ರಭುಲಿಂಗಲೀಲೆ'ಯ ಕಥಾನಕದಲ್ಲೂ ಕಥನಕ್ರಮದಲ್ಲೂ ಬಹಳಷ್ಟು ವ್ಯತ್ಯಾಸಗಳಿವೆ. ಅಲ್ಲಮನನ್ನು ಹುಟ್ಟು ವಿರಕ್ತನನ್ನಾಗಿಯೂ ಸಿದ್ಧಪುರುಷನನ್ನಾಗಿಯೂ ಚಿತ್ರಿಸಲು ಹೊರಟ ಚಾಮರಸ ಹರಿಹರನ ಕಥಾನಕಕ್ಕೆ ಉದ್ದೇಶಪೂರ್ವಕವಾದ ಮಾರ್ಪಾಡುಗಳನ್ನು ತಂದಿರುವುದು ಸಾಧ್ಯ. ಪ್ರಭುದೇವರನ್ನು ಕೇಂದ್ರದಲ್ಲಿರಿಸಿಕೊಂಡು ಸಿದ್ಧರಾಮ, ಮುಕ್ತಾಯುಕ್ತ, ಅಕ್ಕಮಹಾದೇವಿ, ಗೋರಕ್ಷನಾಥ, ಬಸವಣ್ಣ-ಇವರಿಗೆ ಸಂಬಂಧಿಸಿದ ಬೇರೆ ಬೇರೆ ಪ್ರಸಂಗಗಳನ್ನು ಕಾವ್ಯದೊಳಕ್ಕೆ ತಂದು ಸೇರಿಸುವ ಇಲ್ಲಿನ ಕಥಾರಚನೆಗೆ ಶಿವಗಣಪ್ರಸಾದಿ ಮಹಾದೇವಯ್ಯನ ಶೂನ್ಯ ಸಂಪಾದನೆ ಪ್ರೇರಣೆ ಕೊಟ್ಟಿರಬಹುದು. ಹಾಗೆಯೇ ತನಗಿಂತ ಹಿಂದೆ ರಚನೆಯಾಗಿದ್ದ ಇತರ ವೀರಶೈವ ಕಾವ್ಯ ಪುರಾಣಗಳಿಂದ ಚಾಮರಸ ಪ್ರಭಾವಿತನಾಗಿರಬಹುದು.

---

## 4.3.4 ಕಥಾವಸ್ತು

---

'ಪ್ರಭುಲಿಂಗಲೀಲೆ' ಅಲ್ಲಮನ ಚರಿತ್ರೆಯಾಗಿದೆ. ಅಲ್ಲಮನಿಗೆ ಪ್ರಭುದೇವರೆಂದೂ, ಅಲ್ಲಮಪ್ರಭುವೆಂದೂ ನಾಮಾಂತರಗಳುಂಟು. ಅಲ್ಲಮನು ಸಾಮಾನ್ಯನಲ್ಲ, ಪರಶಿವನ ಅವತಾರ ಎಂಬುದು ಚಾಮರಸನ ಗ್ರಹಿಕೆ. "ಸತ್ತವರ ಕಥೆಯಲ್ಲ ಜನನದ ಕುತ್ತದಲಿ ಕುದಿಕುದಿದು ಕರ್ಮದ ಕತ್ತಲೆಗೆ ಸಿಲುಕುವರ ಸೀಮೆಯ ಹೊಲಬು ತಾನಲ್ಲ... ಸತ್ಯ ಶರಣರು ಕೇಳ್ವುದೀ ಪ್ರಭುಲಿಂಗಲೀಲೆಯನು" ಎಂದು ಆತನೇ ಹೇಳಿಕೊಂಡಿದ್ದಾನೆ. ಅವನ ಅಭಿಪ್ರಾಯದಂತೆ ಪ್ರಭುಲಿಂಗಲೀಲೆ ಕೇವಲ ಜೀವನ ಚರಿತ್ರೆಯಲ್ಲ. ಅಲ್ಲಮ ಪ್ರಭುವಿನ ರೂಪದಲ್ಲಿ ಲಿಂಗವು ಮಾಡಿದ ಲೀಲೆ. ವೇದಾಂತದ ಸಾರವಾಗಿಯೂ ಅನುಭವಿಗಳಿಗೆ ಅಮೃತಪ್ರಾಯವಾಗಿಯೂ ಇರುವಂತಹುದು. ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಅನುಗುಣವಾದ ಷಟ್‌ಸ್ಥಲ ಮತ್ತು ಏಕೋತ್ತರಶತಸ್ಥಲಗಳ ಮಾರ್ಗವನ್ನು ಚಾಮರಸನು ಈ ಕಾವ್ಯದಲ್ಲಿ

ನಿರೂಪಿಸಿದ್ದಾನೆ. ವೇದಾಂತದ ಗೂಢಾರ್ಥವು ಸುಲಭವಾಗಿ ರುಚಿಸುವಂತೆ ಅದನ್ನು ತಕ್ಕ ಪಾತ್ರಗಳ ಮೂಲಕ ರಸಭರಿತವಾದ ಕಥಾ ರೂಪದಲ್ಲಿ ಬರೆದಿದ್ದಾನೆ. ಮಾಯೆಯ ಸನ್ನಿವೇಶದಿಂದ ಮೊದಲ್ಗೊಂಡು ಕೊನೆಯವರೆಗೆ ಅಲ್ಲಮನು ತನ್ನನ್ನು ಎದುರಿಸಿದ ಜೀವನ ಸನ್ನವೇಶಗಳಲ್ಲಿ ಸಂಪೂರ್ಣ ವೈರಾಗ್ಯ, ನಿರ್ಲಿಪ್ತತೆ, ಸಮಯಾತೀತತೆ, ಆದರ್ಶ ಗುರುವಿನ ಮಾರ್ಗದರ್ಶನ, ನಿಷ್ಠುರತೆಯೊಡನೆ ಬೆರೆತ ಮಾನವ ಪ್ರೇಮ ಈ ಮೊದಲಾದ ವ್ಯಕ್ತಿತ್ವದ ಅಂಗಗಳನ್ನೂ ತೋರ್ಪಡಿಸಿದ್ದಾನೆ.

## 4.3.5 ಪಾತ್ರಗಳು : ಅಲ್ಲಮ, ಮಾಯೆ, ಸಿದ್ಧರಾಮ, ಬಸವಣ್ಣ

### ಅಲ್ಲಮ

ಚಾಮರಸ ಚಿತ್ರಿಸಿದ ಅಲ್ಲಮ ಒಬ್ಬ ಐತಿಹಾಸಿಕ ವ್ಯಕ್ತಿಯಾಗಿ ಕಾಣುವ ಬದಲು ಪುರಾಣ ಪುರುಷನಾಗಿ ಕಾಣುತ್ತಾನೆ. ಅಲ್ಲಮನ ಹುಟ್ಟನ್ನು ಹೇಳುವಾಗಲೇ ಆತನ ವ್ಯಕ್ತಿತ್ವಕ್ಕೆ ಚಾಮರಸ ಪೌರಾಣಿಕ ಚೌಕಟ್ಟನ್ನು ಕಲ್ಪಿಸಿಕೊಂಡಿರುವುದು ಸ್ಪಷ್ಟವಾಗುತ್ತದೆ; 'ಎನ್ನ ಜೀವ ಸ್ವರೂಪ ವರಸೂನುವೆಂಬಂದದಲಿ ಸುಳಿದನು ತಾನೆ ಅಲ್ಲಮನೆಂಬ ಪೆಸರಲಿ'ಎಂದು ಶಿವ ಪಾರ್ವತಿಗೆ ಅಲ್ಲಮನ ಅವತಾರವನ್ನು ಕುರಿತು ಹೇಳುತ್ತಾನೆ. ಮುಂದಿನ ಅಲ್ಲಮನ ಕಾರ್ಯಗಳೆಲ್ಲ ಪವಾಡಗಳಾಗಿ 'ಪ್ರಭುಲಿಂಗಲೀಲೆ'ಯಲ್ಲಿ ಕಾಣಿಸಿಕೊಳ್ಳುತ್ತದೆ. ಹಾಗಾಗಿ ಚಾಮರಸನ ಅಲ್ಲಮ ನಮ್ಮಲ್ಲೇ ಒಬ್ಬ ಮನುಷ್ಯನಾಗಿದ್ದನೆಂದು ನಮಗೆ ಅನ್ನಿಸುವುದೇ ಇಲ್ಲ. ಈತನ ಸಾಧನೆ ಪವಾಡವಾಗಿ ಕಂಡು ಪೂಜನೀಯವಾಗುತ್ತದೆ. ಈ ನೆಲದ ವ್ಯಕ್ತಿಯೊಬ್ಬ ಮಾನಸಿಕ ಗಟ್ಟಿತನ ಮತ್ತು ವೈಚಾರಿಕ ಶಕ್ತಿಯಿಂದ ಉನ್ನತ ಸಾಧನೆ ಮಾಡಲು ಸಾಧ್ಯ ಎಂಬ ಚಿತ್ರ ಮೂಡುವುದಿಲ್ಲ. ಚಾಮರಸ ಅಲ್ಲಮನ ಸಾಧನಾವಿಧಾನವನ್ನು ಈ ನೆಲದ ಕಸುವಿನಲ್ಲಿ ಕಾಣಿಸದಿರುವುದರಿಂದ ಆತ 'ಸಿದ್ಧಸಾಧಕ'ನಾಗಿದ್ದಾನೆ. ಸಾಧಿಸಿ ನಿಜವನ್ನು ಅರಿಯುವ ಮಾನವನಾಗಿಲ್ಲ. ಚಾಮರಸನ ಪ್ರಕಾರ ಅಲ್ಲಮಪ್ರಭು ಬರಿಯ ಮಾತಿಗೆ ಸಿಕ್ಕದವನು;ಅನುಪಮನು, ಅಸಾಮಾನ್ಯನು, 'ಶಿವಲೀಲೆ'ಯ ಪ್ರತೀಕ ಎಂದರೂ ತಪ್ಪಲ್ಲ. 'ಪ್ರಭುಲಿಂಗಲೀಲೆ'ಯಲ್ಲಿ ಬರುವ ಈಶ್ವರ ತನ್ನ ಪ್ರವೃತ್ತಿಗಳನ್ನೇ ಅಲ್ಲಮನಿಗೂ ಅನ್ವಯಿಸಿ ಹೇಳಿದ್ದಾನೆ. ಹಾಗಾಗಿ ಅಲ್ಲಮ ಶಿವನ ಅಂಶವಾಗುತ್ತಾನೆ. ಶಿವಲೀಲೆಯ ಪರಿ ಅವನಲ್ಲಿ ಉಂಟಾಗುತ್ತದೆ. ಶಿವಾಂಶಿಯಾದ ಅಲ್ಲಮ ಭೂಲೋಕದ ಶಿವನೂ ಆದ. ಜನ್ಮಸಿದ್ಧ ಸಾಧಕನಂತೆ ಕಂಡು ಮಾನವಸಹಜ ಪ್ರವೃತ್ತಿಗಳಿಂದ ದೂರವಾಗಿ ಮಾನವ ಶರೀರಿ ಮಾತ್ರವಾದ. ಇಂತಹ ಅಲ್ಲಮ ಪಾರ್ವತಿಯ ತಾಮಸ ಕಳೆಯಾದ ಮಾಯೆಯ ಕೋಲಾಹಲವನ್ನು ಗೆದ್ದು ಬರುವುದು ಮನುಷ್ಯ ಸಹಜ ಸಂಘರ್ಷವಾಗಿ ಕಾಣದೆ ಸಿದ್ಧಪುರುಷನ ಕೇವಲ ಲೀಲೆಯಾಗಿ, ಪೂರ್ವನಿಶ್ಚಿತ ಫಲಿತವನ್ನು ನೀಡುವ ಕೇವಲ ಘಟನೆಯಾಗಿ ಕಾಣಿಸಿಕೊಳ್ಳುತ್ತದೆ.

ಬಸವಾದಿ ಪ್ರಥಮರಿಗೆ ಅಲ್ಲಮ ಉಪದೇಶಿಸಿದ ಘಟ್ಟದಲ್ಲಿ ಚಾಮರಸ ಕೊಡುವ ಚಿತ್ರಣ ಅಲ್ಲಮನನ್ನು ಪವಾಡಪುರುಷನೆಂದು ಸ್ಪಷ್ಟಗೊಳಿಸುವಂತಹುದು. 'ಲಿಂಗನಿಜವನು ಬಯಸಿ ಭಕ್ತಗಣಂಗಳಿರುತಿರಲು'ಅಲ್ಲಮನು 'ತನ್ನ ಕಟಾಕ್ಷ ಕಾಂತಿಯಲಿ'ಎಲ್ಲರ ಮನೋಮಯದಂಗಳದೊಳ ಹೊಚಿಗಿಡಿದ ತಮದ ತರಂಗಗಳನ್ನು ಹಿಂಗಿಸುವ ತೀರ್ಮಾನ ಕೈಗೊಂಡು ಕಾರಣಕಾಯದಲ್ಲಿ ಸುಳಿಯುತ್ತಾನೆ. ಆತ ತನ್ನ ಲೀಲೆಯ ಬಳಸಬೇಕೆಂದೊಂದು ವೇಷದ ಹೊಳಹಿಲಿ ಬರುತ್ತಿದ್ದನೆಂದು ಕವಿ ಹೇಳುವುದು ಸಾಕ್ಷಾತ ಶಿವನನ್ನು ನೆನಪಿಗೆ ತರುತ್ತದೆ.

### ಮಾಯೆ

ಸಾಕ್ಷಾತ್ ಪಾರ್ವತೀದೇವಿಯ ತಾಮಸಕಳೆಯಾಗಿ ಅಲ್ಲಮನನ್ನು ಪರೀಕ್ಷಿಸಲೆಂದೇ ಮಮಕಾರನ ಮಗಳಾಗಿ ಜನ್ಮವೆತ್ತಿದವಳು ಮಾಯಾದೇವಿ. ದೇಹಸುಖದಿಚ್ಛೆಯಿಂದ ಕರ್ಮಜಂಜಡದಲ್ಲಿ ಸಿಲುಕಿ ಅರಿಷಡ್ವರ್ಗಗಳ ಆಕ್ರಮಣಕ್ಕೆ ಸಿಕ್ಕ ಮನಸ್ಸಿನ ತಾಮಸ ಪ್ರಜ್ಞೆಯ ಪ್ರತೀಕ ಮಾಯೆ. ಬೀಜವು

ಮೊಳಕೆದೋರಿ ಬೆಳೆಯಲು ನೆಲ ನೀರು ಸಹಕರಿಸುವಂತೆ, ಹಿತೋಪದೇಶಕ್ಕೆ ಕಿವಿಗುಡದ ಪಾರ್ವತಿಯ ಛಲ ಬುದ್ಧಿ, ಘನತೆಯ ಬಗೆಗಿರುವ ಲಘುಭಾವ, ದುರಹಂಭಾವದ ಮದಮತಿಗಳು ಮಾಯಾ ಜನನಕ್ಕೆ ಕಾರಣವಾದುವು. ಭೂಲೋಕದಲ್ಲಿ ಅವಳ ತಂದೆ ತಾಯ್ಗಳು ಸಂತಾನ ಪ್ರಾಪ್ತಿಗೆ ಶಿವಪದವನ್ನು ಸಾರದೆ ಕವಲು ದಾರಿಯಲ್ಲಿ ಸಾಗಿ ಜಡದೇವತೆಗಳನ್ನು ಪೂಜಿಸಿದ್ದರಿಂದ ಅಲ್ಲಮನ ಸಾಮೀಪ್ಯ ದೊರೆತರೂ ನೈಜವನ್ನರಿಯದ ಜಡಬುದ್ಧಿ ಅವಳಲ್ಲಿ ನೆಲಸಿದ್ದು. ಕೊನೆಯವರೆಗೂ ಅವನನ್ನು ದೇಹಿಯೆಂದೇ ತಿಳಿದಳು. ಬಯಕೆಯ ಔಚಿತ್ಯವನ್ನರಿಯದ, ಸಾಧನಾ ಮಾರ್ಗದ ಶುದ್ಧಿಯನ್ನರಿಯದವಳಾದಳು. ಭೋಗಲೋಲುಪತೆಯ ಮಿಥ್ಯಾಮೋಹಕ್ಕೊಳಗಾಗದ ಕೀಳು ಮನಕ್ಕೆ ಆತ್ಮ ಪ್ರಜ್ಞೆಯುಂಟಾಗದೆಂಬುದರ ದೃಷ್ಟಾಂತವೀಯಲು ಮಾಯೆಯ ಪಾತ್ರ ಸೃಷ್ಟಿಯಾಗಿದೆ.

## ಸಿದ್ಧರಾಮ

ಚಾಮರಸನ ಸಿದ್ಧರಾಮ ಪ್ರಖ್ಯಾತಿ ಹೊಂದಿದ ಯತಿಶ್ರೇಷ್ಠ. ದೇಗುಲ ನಿರ್ಮಾಣ ಕಾರ್ಯದಲ್ಲಿ ತೊಡಗಿ, ಅದಕ್ಕಾಗಿ ಶ್ರಮಿಸುವ ದೊಡ್ಡ ಜನಸಮೂಹದ ರಕ್ಷಣೆಯ ಭಾರ ಹೊತ್ತವನು. ಆದರೆ ಅವನ ಸ್ಥಿತಿ 'ನೂಲ ಸಂಕಲೆಗಡಿದು ಕನಕದ ಕೋಳವನ್ನು ಕಾಲಿಂಗೆ ಕೀಲಿಸುವವನಂತಾಗಿದೆ'. 'ಬೋಳುಮಂಡೆಯ ಕೀರ್ತಿಗೋಸುಗ ಸಿಕ್ಕಿಬಿದ್ದವನಾಗಿದ್ದಾನೆ. ಸಂಸಾರ ಬಂಧನದಿಂದ ವಿಮೋಚನೆ ಬಯಸಿ ಮತ್ತೆ ಅದರಲ್ಲೆ ಸಿಕ್ಕು ತೊಳಲುತ್ತಿದ್ದಾನೆ. ತನ್ನ ಶಕ್ತಿಯನ್ನು ದೇವಾಧಿದೇವತೆಗಳು ಎದುರಿಸಲಾರರೆಂಬ ಅಹಮ್ಮಿಕೆ, ತೆಗಳಿದವರ ಬಗೆಗೆ ಅಸಹನೆ ಕೋಪ ಮೊದಲಾದ ಭಾವಗಳ ಮಾನಸಿಕ ಒತ್ತಡಕ್ಕೆ ಸಿದ್ಧರಾಮನು ಒಳಗಾಗಿರುವನು. ಯತಿತ್ವವೆಂದರೆ ಈ ಭಾವಗಳ ವಿಸರ್ಜನವೆಂದು ಅವನು ತಿಳಿಯನು. ಅವನಿಗೆ ಅರಿವು ಮೂಡಿಸಲೆಂದು ಬಂದವನು ಅಲ್ಲಮಪ್ರಭು. ಗದರಿ ಪಾಠ ಹೇಳುವ ಶಿಕ್ಷಕನಂತೆ ಕಠಿಣವಾದ ಮಾತಿನ ಚಾಟಿಯೇಟಿನಿಂದ ಬುದ್ಧಿಗಲಿಸುವನು. ಸಿದ್ಧರಾಮನ ಹಣೆಗಣ್ಣ ಉರಿಯನ್ನು ಅಲ್ಲಮ ನಂದಿಸಿದ ಮೇಲೆ ಅವನ ಮುಗಿಲು ಮುಟ್ಟಿದ ಕೋಪ ನೆಲಕ್ಕಪ್ಪಳಿಸಿ ಚೂರು ಚೂರಾಯ್ತು. ತನ್ನ ಅವಿವೇಕದ ಅರಿವಾಗಿ ಮನ ನಾಚಿತು. ಅಜ್ಞಾನದಿಂದ ಗುರುವನ್ನು ಗುರುತಿಸದಿದ್ದುದಕ್ಕೆ ಮನ ಮರುಗಿತು. ಸಿದ್ಧರಾಮ ಸದಾಚಾರಿಯಾದುದರಿಂದಲೇ ದುರಭಿಮಾನವನ್ನು ತೊರೆದ, ಸದ್ವಿವೇಕ ಅವನಲ್ಲಿ ಬೆಳಗಿತು. ಉತ್ತಮಾಧಮ ಪಕ್ಷಪಾತ ತನ್ನಲ್ಲಿದೆಯೆಂದು ಅವನು ಒಪ್ಪಿಕೊಳ್ಳುವುದು ಮಹಾತ್ಮನಾಗುವುದಕ್ಕೆ ಒಂದು ಮೆಟ್ಟಿಲಾಗಿದೆ. ಸರ್ವರು ಸಮಭಾವದಲಿ ಕಾಣುವ ಭಾವನೆಯನ್ನು ತನಗೆ ನೀಡಬೇಕೆಂದು ಅವನು ಅಲ್ಲಮನನ್ನು ಕೇಳುವುದು ಘನವಾದುದನ್ನು ಹಾರೈಸುವ ಹಿರಿತನದ ಗುರುತಾಗಿದೆ. ಅವನು ಅಲ್ಲಮನನ್ನು ಗುರುವಾಗಿ ಸ್ವೀಕರಿಸಿದ್ದರಿಂದ ಚಿತ್ತ ಪರಿಪಾಕವುಂಟಾಗಿ ತತ್ವಬೋಧೆ ದೊರೆತು ಪೂರ್ಣಜ್ಞಾನಕ್ಕೆ ಅವಕಾಶವಾಯಿತು.

## ಬಸವಣ್ಣ

ಬಸವಣ್ಣನ ವ್ಯಕ್ತಿ ಚಿತ್ರಣವು 'ಪ್ರಭುಲಿಂಗಲೀಲೆ'ಯಲ್ಲಿ ವಿಸ್ತಾರವಾಗಿ ಮೂಡಿಬಂದಿದೆ. ಇವನ ಜನ್ಮವು ವ್ಯಷ್ಟಿಹಿತ ಮತ್ತು ಸಮಷ್ಟಿಹಿತಗಳೆರಡನ್ನೂ ಸಾಧಿಸಲೆಂದಾದುದು. ಅಲ್ಲಮನ ಜೊತೆಯಲ್ಲಿದ್ದು ಸುಖಿಯಾಗಲೆಂದೂ, ಇವನ ಭಕ್ತಿಕಾರಣದಿಂದ ಸರ್ವರೂ ಸ್ವಾನುಭವ ಸುಖ ಸ್ವರೂಪ ವಿಧಾನವ ಸಾಧಿಸಲೆಂದೂ ಉದಿಸಿದ ಕಾರಣ ಪುರುಷನು. ಈ ಎರಡು ಉದ್ದೇಶಗಳು ನೆರವೇರಲು ಸಹಕಾರಿಯಾಗುವಂತೆ ಬಸವನ ವ್ಯಕ್ತಿತ್ವ ಇಲ್ಲಿ ರೂಪಗೊಂಡಿದೆ. ಏಕಾಂಗಿಯಾದ ಸಾಧಕ ಜನಸಮೂಹದೊಡನೆ ಬಾಳುವ ಸಾಧಕನಿಗಿಂತ ಹೆಚ್ಚು ಸ್ವತಂತ್ರನು. ಬಸವನು ಪರಹಿತ ಸಾಧನೆಯಲ್ಲಿಯೂ ತೊಡಗಿರುವಾಗ ಅವನು ತಾಳ್ಮೆಯ ಮೂರ್ತಿಯಾಗಿರಬೇಕಾದುದು ಸಹಜವೇ. ಈ ಗುಣ ಕೈಲಾಸದಲ್ಲಿ ಸ್ಫುಟವಾಗಿ ತೋರಿದೆ. ಭೂಲೋಕದಲ್ಲಿ ಹುಟ್ಟಿದಲ್ಲದೆ ಅಲ್ಲಮನು ಸಿಕ್ಕನೆಂದು, ಅಲ್ಲಿ ಹುಟ್ಟಲು ಶಿವನಿಂದ ಆದೇಶ ದೊರೆತಾಗ ಬಸವ ಇತರ ಶಿವಗಣಗಳಂತೆ ಭೂಮಿಯಲ್ಲಿ ಅವತರಿಸುತ್ತಾನೆ.

ಕೈಲಾಸದಲ್ಲಿದ್ದಾಗ ಶಿವನಿಂದ ಪಂಚವದನನಲ್ಲಿ ಹೊಗಳಿಸಿಕೊಳ್ಳಲು ಕಾರಣವಾದ ಗುಣಗಳೇ ಬಸವಣ್ಣ ಭೂಲೋಕದಲ್ಲಿ ಜನಿಸಿದಾಗಲೂ ಕಾಣಿಸಿಕೊಳ್ಳುತ್ತವೆ.

ಬಸವನ ಮನ ಬಹು ವಿಶಾಲವಾದುದು. ಎಲ್ಲರಲ್ಲಿಯೂ ದಯೆಯುಳ್ಳವನು ಆತ. ಎಲ್ಲರಿಗೂ ನೀಡುವ ಕೈ ಆತನದು. ಪವಾಡಗಳನ್ನು ಮೆರೆಯುತ್ತಾ ಲಿಂಗ ಜಂಗಮಕ್ಕೆ ನಿರಂತರವಾಗಿ ನೀಡುತ್ತಿದ್ದನು. ಬೇಡಿದವರಿಗೆ ಬೇಡಿದುದನ್ನು ನಿಷ್ಠೆಯಿಂದ ಕೊಡುತ್ತಿದ್ದನು. ಸ್ವಾರ್ಥರಹಿತ ಸೇವೆ ಮಾಡಿದೆನೆಂದು ಭಾವಿಸಿದ ದಾಸೋಹ ಭಾವ, ಮೃದು ಮಾತು, ನಯದ ನಡೆಗಳುಳ್ಳವನು. ಚಾಮರಸನ ದೃಷ್ಟಿಯಲ್ಲಿ ಶರಣರು ದೋಷಾತೀತರು. ಹಾಗಾಗಿ ಅವರ ಜನನಕ್ಕೆ ಅತ ಕೊಡುವ ಕಾರಣವೂ ಬೇರೆ. ಅನುಪಮ ಸಿದ್ಧಿ ಪಡೆಯುವುದಕ್ಕೆ ಇಲ್ಲಿಗೆ ಬಂದವರು ಅವರು. ಬಸವನು ಪ್ರಭುವನ್ನು ವಿಕೃತ ವೇಷದಲ್ಲಿಯೂ ಗುರುತಿಸಲು ಸಾಧ್ಯವಾದುದು ಅವನ ಚಿತ್ತನಿರ್ಮಲತೆಯಿಂದಾಯಿತೆಂದು ಚಾಮರಸನ ಮತ. ಮಹಾಮಹಿಮನಾಗಿ, ಭಕ್ತಿಯನ್ನು ಬಿತ್ತಿ ಬೆಳೆದ ಪವಾಡಪುರಷನಾಗಿ ಬಸವನು ಇಲ್ಲಿ ಕಾಣಿಸಿಕೊಂಡಿರುವನು.

---

## 4.3.6 ಪ್ರಸಂಗಗಳು :

---

### ಮಾಯಾಕೋಲಾಹಲ ಪ್ರಸಂಗ,

ಮಾಯಾದೇವಿ ಮತ್ತು ಅಲ್ಲಮರು ಸೇರುವ ಸನ್ನಿವೇಶ ಕೇವಲ ಶೃಂಗಾರದ್ದು. ಕೈಲಾಸದಲ್ಲಿ ಪಾರ್ವತಿ ಮಾಡಿದ ಶಪಥಕ್ಕೆ ತಕ್ಕ ಪ್ರತೀಕಾರವು ಶೃಂಗಾರ ಸನ್ನಿವೇಶದಿಂದಲೆ ನಡೆಯಬೇಕಾಗಿರುವುದರಿಂದ ಮಾಯಾವಿಲಾಸ ವಿಡಂಬನಕ್ಕೆ ಇದನ್ನು ತಂದುಕೊಳ್ಳಲೇಬೇಕಾಯಿತು. ಯಾವ ಮಾಯೆ ಜನನ ಕಾಲದಲ್ಲಿಯೆ ಸಿದ್ಧ ಸಾಧಕರ ಚಿತ್ತಗಳು ಚಂಚಲವಾಗಿ ಅವರು ವ್ಯಥಿತರಾದರೋ, ಯಾವ ಮಾಯೆ ಯೌವನದ ವಸಂತದಲ್ಲಿ ಸರ್ವಾಲಂಕಾರಭೂಷಿತಳಾಗಿ ಒಮ್ಮೆ ಸುಳಿದರೆ ಸಚರಾಚರವೆಲ್ಲ ಪಾದನಖ ಕಾಂತಿಗೆ ಶರಣು ಬೀಳುತ್ತಿದ್ದಿತೋ, ಯಾವ ಮಾಯೆ ಬ್ರಹ್ಮ ವಿಷ್ಣುಗಳನ್ನು ತೊತ್ತಳ ತುಳಿದು ರುದ್ರಗಣ ಪ್ರಮಥ ಗಣಂಗಳ ಮರುಳು ಮಾಡಿ, ನೊಸಲ ಕಣ್ಣು ಪಂಚಮುಖದವರಿಗೆ ಅರ್ಧಾಂಗಿನಿಯಾಯಿತೋ, ಆ ಮಾಯೆ ಲಾಸ್ಯನಿರತಳಾಗಿ ಭಾವಭಂಗಿಗಳ ಚಮತ್ಕಾರ ವೈಖರಿಗಳ ಜಾಲವನ್ನು ಬೀಸಿದರೆ ಸೋಲದವರಾರು. ಅಂತಹ ಮಾಯೆಗೂ ಸೋಲದೆ ಮಾಯಾ ಕೋಲಾಹಲನಾಗಿದ್ದನೆಂದು ಅಲ್ಲಮನನ್ನು ತೋರಿಸಬೇಕಾಗಿದ್ದರೆ ಶೃಂಗಾರ ಸನ್ನಿವೇಶವು ಇದ್ದಲ್ಲದೆ ಆಗುತ್ತಿರಲಿಲ್ಲ. ಆದರೆ ಆ ಶೃಂಗಾರವು ನಾಯಕ ನಾಯಕಿಯರ ಸಮಾಗಮದಲ್ಲಿ ತೋರಿ ಬರುವ ಶೃಂಗಾರವಲ್ಲವೆಂದೂ ಯೋಗಿ ಶ್ರೇಷ್ಠನಾದ ನಿರ್ವಿಕಲ್ಪ ಸಮಾಧಿ ಸಾಧಕನಾದ ಅವತಾರಪುರುಷನ ಮಾಯಾ ತಿರಸ್ಕಾರದಲ್ಲಿ ತೋರಿಬರುವ ಶೃಂಗಾರವೆಂದೂ ಚಾಮರಸನು ಗ್ರಹಿಸಿ ಅದರಂತೆ ಈ ಸನ್ನಿವೇಶವನ್ನು ಚಿತ್ರಿಸಿದ್ದಾನೆ.

ಚಾಮರಸ ಚಿತ್ರಿಸಿರುವ ಅಲ್ಲಮ-ಮಾಯೆಯರ ಈ ಪ್ರಸಂಗ ಒಂದು ಮಹತ್ವದ ಮೌಲಿಕ ಸಂಘರ್ಷವಾಗುವ ಸಾಧ್ಯತೆಗಳುಳ್ಳದ್ದು. ಮಾಯೆ ಇಲ್ಲಿ ಸಾಂಕೇತಿಕ ಪಾತ್ರವಾಗುವ ಅವಕಾಶ ಪಡೆದಿದ್ದು ಅಲ್ಲಮನ ವ್ಯಕ್ತಿತ್ವದ ವಿಕಾಸಕ್ಕೆ ಒಳ್ಳೆಯ ಅವಕಾಶವೂ ಹೌದು. ಅಲ್ಲಮ ಮತ್ತು ಮಾಯೆ ಮುಖಾಮುಖಿಯಾಗುವುದು ಮಹತ್ವದ ಸಾಂಕೇತಿಕ ಸಂದರ್ಭವಾಗಬಹುದಾಗಿದ್ದು, ಈಗ ಅಷ್ಟು ಅರ್ಥವಂತಿಕೆ ತೋರಿಸದೆ ಹೋಗಿದೆ. ಇದಕ್ಕೆ ಈ ಪಾತ್ರಗಳ ಅವತಾರದ ಹಿನ್ನೆಲೆ ಒಂದು ಮುಖ್ಯ ಕಾರಣ.

### ಅಲ್ಲಮ ಸಿದ್ಧರಾಮನನ್ನು ಭೇಟಿಯಾದ ಸಂದರ್ಭ

ಸಿದ್ಧರಾಮ ಒಬ್ಬ ಧಾರ್ಮಿಕ ಸಾಧಕ. ಅವನ ಶಿಷ್ಯರು ಕಾಯಕದಲ್ಲಿ ತೊಡಗಿದ್ದಲ್ಲಿಗೆ ಬಂದ ಅಲ್ಲಮ ಸಿದ್ಧರಾಮನ ಬಗೆಗೆ ಲಘುವಾಗಿ ನುಡಿದಾಗ ಗುಪ್ತರು ಅಲ್ಲಮನನ್ನು ಬಂಧಿಸಲು

ಪ್ರಯುಕ್ತಿಸುತ್ತಾರೆ. ಅವರು ಎಸೆದ ಕವಣೆಗಲ್ಲುಗಳಲ್ಲಿ ಅಲ್ಲಮ ಹೂತುಹೋದ ಎಂದುಕೊಳ್ಳುತ್ತಿರುವಾಗ 'ಕಲ್ಲರಾಶಿಯ ಮೇಲೆ ನಿಂದನು ಮತ್ತೆ ತನ್ನಯ ಲೀಲೆಯಲಿ ನಿರ್ಲೇಪನಿರ್ದನು ನಗುತ'ಈ ಮಾತು ಅಲ್ಲಮ ಪವಾಡಪುರುಷನೆಂದು ಸಂಬಿದ, ಸಂಬಿಸುವ ಚಿತ್ರಣ. ಮುಂದೆ ಸಿದ್ಧರಾಮನಿಗೆ ಸುದ್ದಿಹೋಗಿ ಅತ ಘುಡುಘುಡಿಸಿ ಬರುತ್ತಾನೆ. ಆಗ ಅಲ್ಲಮ ಹೇಳುವ 'ಈಸು ಕೋಪಾಟೋಪ ರೋಷಾವೇಶವೇತಕೆ ಯೋಗಿಯಾದ ನಿರಾಸೆವಂತಂಗೆ'ಎಂಬ ಮಾತು ಇಬ್ಬರ ವಿಭಿನ್ನ ಸ್ವಭಾವವನ್ನು ಸೂಚಿಸುತ್ತದೆ. ಅಲ್ಲಮನು ತನ್ನ ಬಗೆಗೆ ಆಡಿದ ಮಾತುಗಳಿಂದ ಕೋಪಾವಿಷ್ಟನಾದ ಸಿದ್ಧರಾಮ ನೊಸಲಗಣ್ಣು ತೆರೆದಾಗ ಅಲ್ಲಮ ಅಪಾಯವನ್ನು ತೊಡೆದುಹಾಕಿ ಜಗದ ಜನರನ್ನು ಉಳಿಸುತ್ತಾನೆ. ಇದು ಪವಾಡದಂತೆ ಕಂಡರೂ ಆಳದಲ್ಲಿ ಕೋಪದ ವ್ಯರ್ಥತೆ ಹೇಳುವ ಧ್ವನಿ ಇದೆ; ಅದೇ ಸಂದರ್ಭದಲ್ಲಿ ಅಲ್ಲಮನ ಶಕ್ತಿಯನ್ನು ವಿಜೃಂಭಿಸುವ ಒಲವು ಇದೆ. ಇದಾದ ಮೇಲೆ ಕವಿ ಅಲ್ಲಮನ ಉಪದೇಶಕ್ಕೆ ಪ್ರಾಮುಖ್ಯತೆ ಕೊಟ್ಟಿದ್ದಾನೆ. ಇಲ್ಲಿ ನಿಜವಾದ ಅರ್ಥದಲ್ಲಿ ವೈಚಾರಿಕ ಮುಖಾಮುಖಿ ಸಂಭವಿಸಿ ಆ ಮೂಲಕ ಸತ್ಯ ಹೊರಬಿದ್ದ ಅನುಭವವಾಗದೆ ಸ್ವಲ್ಪ ಹೆಚ್ಚೂ ಕಮ್ಮಿ ಏಕಮುಖ ಸಂಚಾರದಂತೆ ಆಗುತ್ತದೆ. ಹಾಗಾಗಿ ವಿಚಾರ ಸಂಘರ್ಷಕ್ಕೆ ಬದಲಾಗಿ ಮೊದಲು ನಡೆದ ಶಕ್ತಿ ಸಂಘರ್ಷ ಮುಖ್ಯವಾಗುತ್ತದೆ. ಈ ಶಕ್ತಿ ಸಂಘರ್ಷ ವೈಯಕ್ತಿಕವಾಗುವುದರಿಂದ ತಾತ್ವಿಕ ತಳಹದಿಯಿಂದ ಪ್ರೇರಿತವಾದಂತೆ ಅನ್ನಿಸುವುದಿಲ್ಲ. ಮೇಲಾಗಿ ಅಲ್ಲಮ ತನ್ನ ಒಲವು ನಿಲುವುಗಳ ಪ್ರಸಾರದ ಭರದಲ್ಲಿ ಸೇವಾಕಾರ್ಯಗಳನ್ನು ಸಂಪೂರ್ಣ ಅಲಕ್ಷಿಸಿ ತನ್ನ ಮಾರ್ಗದ ಮಾತು ಬೆಳೆಸುವುದು ಒಂದು ಅತಿರೇಕದ ಕ್ರಿಯೆಯಾಗಿದೆ.

### 4.3.7 ಕೃತಿಯ ಭಾಷೆ ಶೈಲಿ

ಚಾಮರಸನದು ಸರಳ ಭಾಷಾ ಶೈಲಿ;ನಿರಾಡಂಬರ ಸುಲಲಿತ ನಿರೂಪಣೆಯ ರೀತಿ ಅವನ ಶೈಲಿಯ ಅತ್ಯಂತ ಪ್ರಮುಖ ವೈಲಕ್ಷಣ್ಯವೆನ್ನಬಹುದು. ಸರಳತೆ ಎಂಬುದನ್ನು ಚಾಮರಸ ಸೋಗಿನ ಶೈಲಿಯನ್ನಾಗಿಸದೆ ಸತ್ವ ಪೂರ್ಣವಾಗಿಸಿದ್ದಾನೆ. ಕಾವ್ಯ ಕೌಶಲದಿಂದ ಹೆಣೆದಿದ್ದಾನೆ. ಆದುದರಿಂದ ಅವನ ಸರಳತೆ ಅವನ ಕವಿತ್ವದ ಬಡತನವನ್ನಾಗಲಿ, ಶೈಲಿಯ ಶಿಥಿಲತೆಯನ್ನಾಗಲಿ ತೋರದೆ ಅವನ ಕಾವ್ಯ ಶಕ್ತಿಗೆ ಸಾಕ್ಷಿಯಾಗಿ ನಿಲ್ಲುತ್ತದೆ. ಸುಲಲಿತ ಪದಗಳ ಸುಸಂಯೋಜಿತ ಸಂಸ್ಕೃತ ಭೂಯಿಷ್ಠವಲ್ಲದ, ನಿರರ್ಗಳವಾಗಿ ಓದಿಸಿಕೊಂಡು ಹೋಗುವ ಸಾಮಾನ್ಯನೂ ಆಸ್ವಾದಿಸಬಹುದಾದ ಚಾಮರಸನ ಸರಳ ಶೈಲಿ ಆಕರ್ಷಕವಾಗಿದೆ. ಒಂದು ಉದಾಹರಣೆ-

ನಡೆವ ಲತೆಗಳು ನಗುವ ಗಿಡಗಳು
ನುಡಿವ ಶಿಲೆಗಳು ತೇಜದಿಂದುಂ
ಯಿಡುವ ತರುಗಳು ದಿವ್ಯರುಚಿಗಳನೀವ ಗುಲ್ಮಗಳು
ಕುಡಿದೊಡಂತಃಕರಣ ಶುದ್ಧಿಯ ಕೊಡುವ ಮಡುಗಳು ಜಾತಿವೈರವ
ತೊಡದ ಖಗಮೃಗ ಮೆಳೆದುದಾ ಶ್ರೀಗಿರಿಯ ಶಿಖರದಲಿ

ಇಂಥ ನುಡಿಗಳಲ್ಲಿ ಅಲಂಕಾರವಿಲ್ಲ, ಕ್ಲಿಷ್ಟ ನುಡಿಗಳಿಲ್ಲ, ಉಕ್ತಿ ಚಮತ್ಕಾರವಿಲ್ಲ, ಅಸ್ಪಷ್ಟತೆ ಇಲ್ಲ. ಹಲವೆಡೆ ಅನಾಯಾಸ ನಾದಮಾಧುರ್ಯ ಕಾಣಿಸಿಕೊಂಡಿದೆ. ಚಾಮರಸನ ವರ್ಣನೆಗಳು, ಸಂಭಾಷಣೆಗಳು, ತಾತ್ವಿಕ ವಿವೇಚನೆಗಳು, ಅಲಂಕಾರಗಳು, ದೇಸಿ ಲೋಕೋಕ್ತಿಗಳು ಎಲ್ಲವೂ ಸರಳವಾಗಿಯೇ ಹಾಸುಹೊಕ್ಕಾಗಿವೆ. ಅಷ್ಟಾದಶ ವರ್ಣನೆಯ ಗೀಳನ್ನು ಎಳ್ಳಷ್ಟೂ ಹಚ್ಚಿಕೊಂಡಿಲ್ಲ. ಪ್ರಕೃತಿ ವರ್ಣನೆಗಳು, ಮಾನವ ಸ್ವಭಾವದ ವರ್ಣನೆಗಳು, ನೃತ್ಯ ವರ್ಣನೆಗಳನ್ನು ಅವಶ್ಯವೆನಿಸುವಷ್ಟನ್ನು ಮಾತ್ರ ಉಚಿತ ಎಡೆಗಳಲ್ಲಿ ಮಾತ್ರ ತಂದು ಹೃದಯಂಗಮವಾಗಿ ಮೂಡಿಸಿದ್ದಾನೆ. ಚಾಮರಸನ ಇಡೀ ಕಾವ್ಯ ಸಂಭಾಷಣೆಯ ಹಂದರದ ಮೇಲೆ ಹೆಣೆಯಲ್ಪಟ್ಟಿದೆ. ಸತ್ವಪೂರ್ಣ ಸಂಭಾಷಣೆಗಳಿಂದ ಕಾವ್ಯ ಹೆಚ್ಚು ಚೆಲುವೆನಿಸಿದೆ; ಆತ್ಮೀಯವೆನಿಸಿದೆ.

'ದೇಸಿ' ಚಾಮರಸನ ಭಾಷಾಶೈಲಿಯ ಇನ್ನೊಂದು ಎದ್ದು ಕಾಣುವ ಅಂಶ. ದಿನಬಳಕೆಯ ಮಾತುಗಳನ್ನೇ ಬಳಸಿ ಸ್ವಾರಸ್ಯವನ್ನು ಹೆಚ್ಚಿಸುತ್ತಾನೆ. ಆ ಮಾತುಗಳು ಅರ್ಥಗರ್ಭಿತವಾಗಿ, ಸಂದರ್ಭೋಚಿತವಾಗಿ ಬಂದು ಭಾಷೆಯ ಸತ್ವವನ್ನು, ಸಾಮರ್ಥ್ಯವನ್ನು ಹೆಚ್ಚಿಸಿದೆ. 'ಅಣ್ಣಾ ಕೇಲುದಕದಲಿ ಮುಳುಗಿದ ಸುಣ್ಣಕಲ್ಲಂತಾಗಿ ಕುದಿಯುತ ಬಣ್ಣವಳಿದಳು ಮಾಯೆ', 'ಹಡೆವ ಸೊಳೆಗೆ ಹುಟ್ಟದೆ ಗುಡಿಲ ಸುಡುವಂದದಲಿ', 'ಬಸುರ ಹೆಂಡತಿಯೂಟ ಹೊಟ್ಟೆಯ ಶಿಶುವ ದಣಿಸುವವೊಲು' - ಇಂತಹ ನೂರಾರು ಮಾತುಗಳು ಚಾಮರಸನ ದೇಸಿ ಶೈಲಿಯ ಸತ್ವವನ್ನು ಸೂಚಿಸುತ್ತವೆ. ಅವನ ನಾಣ್ಣುಡಿಗಳು, ಉಪಮೆ, ದೃಷ್ಟಾಂತಗಳು ಕವಿಯ ಲೋಕಾನುಭವದ ಘನತೆಯನ್ನು ಸಾರುತ್ತದೆ. ಪಾತ್ರಗಳ ವೇಷ ಭೂಷಣ, ಉಡಿಗೆ-ತೊಡಿಗೆಗಳು ಇವುಗಳನ್ನು ವರ್ಣಿಸುವಲ್ಲಿ ಅವನು ನೀಡಿರುವ ವಿವರಗಳು ಅವನ ದೇಸೀಪ್ರಿಯತೆಯ ಮೈಯಾಗಿ ನಿಂತಿವೆ.

ಚಾಮರಸನ ಶೈಲಿ ಚಾಮರಸನದೇ ಆದ ವಿಶಿಷ್ಟ ಶೈಲಿಯಾದರೂ ಅನಿವಾರ್ಯವಾಗಿಯೆಂಬಂತೆ ಅವನ ಶೈಲಿಯ ಮೇಲೆ ಆದ ವಚನಗಳ ಪ್ರಭಾವ ಗಮನಾರ್ಹವಾದುದು. ಚಾಮರಸನ ಕಾಲಕ್ಕೆ ವಚನಾಧ್ಯಯನವನ್ನು ವ್ಯವಸ್ಥಿತವಾಗಿ ನಡೆಸುವ ಒಂದು ಒಳ್ಳೆಯ ವಾತಾವರಣವೇ ನಿರ್ಮಾಣವಾಗಿತ್ತು. ಚಾಮರಸ ಅದಕ್ಕೆ ಹೊರತಾಗಿರಲಿಲ್ಲ.

### 4.3.8 ಕೃತಿಯ ಮಹತ್ವ

ಪ್ರಭುಲಿಂಗಲೀಲೆ ಚಾರಿತ್ರ-ಕಥಾ-ನಿರೂಪಕ ಕಾವ್ಯ ಮಾತ್ರವಲ್ಲ, ಅದು ಒಂದು ಬೃಹತ್ ರೂಪಕಾವ್ಯ. ವೀರಶೈವ ಧರ್ಮ-ತತ್ವ ಬಿಂಬಿಸುವ ಅಂಗ-ಲಿಂಗ ಲೀಲೆಯೇ ಈ ವಿಶ್ವದ ಲೀಲೆ ಎಂಬ ಧರ್ಮತತ್ವವನ್ನು ಪ್ರಭುಲಿಂಗಲೀಲೆ ಕಾವ್ಯಧರ್ಮವಾಗಿಸಿ, ಅವುಗಳು ಅನನ್ಯತೆಯನ್ನು ಸಾಧಿಸಿದೆ. ಕವಿ ಚಾಮರಸ ಇದನ್ನು ಉದ್ದೇಶಪೂರ್ವಕವಾಗಿ ಸಾಧಿಸಿರಬಹುದೆಂಬುದಕ್ಕೆ ಹೇರಳ ಕಾರಣಗಳಿವೆ. ಆದರೆ, ಕಾವ್ಯದ ಎಲ್ಲಾ ಅಂಶಗಳಲ್ಲಿ ಈ 'ರೂಪಕತೆ'ಯನ್ನು ಸಾಧಿಸಲು ಪ್ರಜ್ಞಾಪೂರ್ವಕವಾದ ಪ್ರಯತ್ನವನ್ನೇ ಮಾಡಬೇಕಾಗುತ್ತದೆ. ಕಾವ್ಯದ ಸನ್ನಿವೇಶಗಳೆಲ್ಲ ಪ್ರಭು ಪ್ರಸನ್ನತೆಯನ್ನು ಪಡೆಯುವ ಭಕ್ತಿ ಸಾಧನೆಯ ರೂಪಕಗಳು, ಆಯಾ ಪಾತ್ರಗಳೆಲ್ಲ ಶಿವಾದ್ವೈತ ತತ್ವದ ಪ್ರತೀಕಗಳು ಎಂದು ಭಾವಿಸಿದಾಗ, ಸಮಗ್ರ ಕಾವ್ಯದ 'ಪ್ರಬಂಧಧ್ವನಿ' ಇಂಗಿತವಾಗುತ್ತದೆ. ರೂಪಕತೆ ಸಾರ್ಥಕವೆನಿಸುತ್ತದೆ. ವೀರಶೈವ ಕಾವ್ಯಗಳಲ್ಲೇಕೆ-ಕುಮಾರವ್ಯಾಸನ ಹೊರತಾಗಿ ಕನ್ನಡ ಕಾವ್ಯಗಳಲ್ಲೆಲ್ಲಿಯೂ ಕಾಣದ ಈ 'ದರ್ಶನ ಧ್ವನಿರೂಪಕ ಕಾವ್ಯ' ಚಾಮರಸನ ಸ್ವಂತಿಕೆ ಹಾಗೂ ಶ್ರೀಮಂತಿಕೆ. ಹೀಗೆ ಕಾವ್ಯಕಲೆಯ ದೃಷ್ಟಿಯಿಂದ ಚಾಮರಸನ ಸಾಧನೆ ಉನ್ನತ ಮಟ್ಟದ್ದಾಗಿದೆ.

ಪ್ರಭುಲಿಂಗಲೀಲೆ ಸಮಕಾಲೀನ ಜನಪ್ರಿಯತೆಯಷ್ಟೇ ಅಲ್ಲದೆ, ಸರ್ವಕಾಲೀನ ಹಾಗೂ ಬಹು ಭಾಷೀಯ ಪ್ರಿಯತೆಯನ್ನೂ ಗಳಿಸುವ ಪುಣ್ಯ ಪಡೆದ ಕನ್ನಡದ ಏಕ ಮಾತ್ರ ಕೃತಿಯಾಗಿದೆ. ಪ್ರೌಢದೇವರಾಯನ ಅರಮನೆಯಲ್ಲಿ ಮೆರೆಯಿತೋ ಇಲ್ಲವೋ, ಎಲ್ಲ ಗುರುಮನೆ-ಮಠಗಳಲ್ಲಿ ಮಾತ್ರ ಅತ್ಯಂತ ಪೂಜ್ಯವಾದ ಪುರಾಣವಾಗಿ ಮೆರೆದಿದೆ. ನಾಲ್ಕು ಶತಮಾನಗಳ ಅವಧಿಯಲ್ಲಿ ಸಂಸ್ಕೃತ, ತೆಲುಗು, ತಮಿಳ, ಮರಾಠಿ ಹಾಗೂ ಇಂಗ್ಲೀಷ್ ಭಾಷೆಗಳಲ್ಲಿ ಅನುವಾದಗೊಂಡಿರುವುದು ಕೃತಿಯ ಸಾರ್ಥಕತೆಯನ್ನು ಬಿಂಬಿಸುತ್ತದೆ. ಈ ಎಲ್ಲ ಅನುವಾದಗಳ ಗುರಿ-ಗಮ್ಯಗಳೇನೇ ಇರಲಿ, ಗುಣ-ದೋಷಗಳೇನೇ ಇರಲಿ, ಅವೆಲ್ಲ ಆಯಾ ಭಾಷೆಗಳಲ್ಲಿ ಇಂದಿಗೂ ಜನಪ್ರಿಯ ಕೃತಿಗಳಷ್ಟೇ ಅಲ್ಲ, ಸಾಹಿತ್ಯದ ಮಾದರಿ ಗ್ರಂಥಗಳಾಗಿವೆಯಂತೆ. ಒಟ್ಟಿನಲ್ಲಿ ಚಾಮರಸನ ಪ್ರಭುಲಿಂಗಲೀಲೆ ಕನ್ನಡದ ಶ್ರೇಷ್ಠ ಕಾವ್ಯಗಳಲ್ಲೊಂದು, ನಿರಂತರವಾದ ಜನಪ್ರಿಯತೆಯೇ ಅದರ ಹಿರಿಮೆಯನ್ನು ಸಾರುತ್ತಿದೆ.

## 4.4 ಕುಮಾರ ವಾಲ್ಮೀಕಿ

ಕುಮಾರವ್ಯಾಸನ ತರುವಾಯ ಅವನಿಂದ ಪ್ರತ್ಯಕ್ಷವಾಗಿ ಇಲ್ಲವೆ ಅಪ್ರತ್ಯಕ್ಷವಾಗಿ ಪ್ರೇರಣೆ ಹೊಂದಿದ ಭಾಗವತ ಕವಿಗಳ ಪರಂಪರೆಯೊಂದು ಬೆಳೆದುಬಂದಿತು. ಕನ್ನಡದಲ್ಲಿ ಧಾರ್ಮಿಕ, ತಾತ್ವಿಕ ವಿಷಯಗಳನ್ನು ನೇರವಾಗಿಯೂ ಕಥಾರೂಪದಲ್ಲಿಯೂ ನಿರೂಪಿಸಬೇಕೆಂಬ ಬ್ರಾಹ್ಮಣ ಕವಿಗಳ ಶ್ರದ್ಧೆ ದೃಢವಾಯಿತು. ಮಹಾಭಾರತ, ಭಗವದ್ಗೀತೆ, ರಾಮಾಯಣ, ಭಾಗವತ, ಪುರಾಣಗಳು, ದರ್ಶನಗಳು ಕನ್ನಡದ ರೂಪತಾಳಿದವು. ಈ ಪರಂಪರೆಯಲ್ಲಿ ಕಾಣಿಸಿಕೊಂಡ ಕವಿ ಕುಮಾರ ವಾಲ್ಮೀಕಿ. ಪಂಪನ ಪ್ರೇರಣೆಯಿಂದ ಮತ್ತು ಅವನ ವಿಷಯಕವಾದ ಹೆಮ್ಮೆಯಿಂದ ನಾಗಚಂದ್ರನು ಅಭಿನವ ಪಂಪನಾದಂತೆ ಕುಮಾರವ್ಯಾಸನ ಪ್ರೇರಣೆಯಿಂದ ಕುಮಾರವಾಲ್ಮೀಕಿ ತಲೆದೋರಿದನು.

### 4.4.1 ಕವಿಯ ಕಾಲ

ಕುಮಾರವಾಲ್ಮೀಕಿಯು ತನ್ನ ಕೃತಿಯಲ್ಲಿ ತನ್ನ ನಿಜನಾಮ, ದೇಶ, ಕಾಲ, ಆಶ್ರಯ ಮೊದಲಾದವುಗಳನ್ನು ಕುರಿತು ಏನನ್ನೂ ಹೇಳಿಲ್ಲ. ಮಧ್ವಾಚಾರ್ಯ, ವಾಲ್ಮೀಕಿ ಮತ್ತು ಕುಮಾರವ್ಯಾಸರನ್ನು ಮಾತ್ರ ಸ್ಮರಿಸಿದ್ದಾನೆ. ಕುಮಾರವಾಲ್ಮೀಕಿಯನ್ನು ನಂತರದ ಮೂವರು ಕವಿಗಳು ಸ್ಮರಿಸಿರುವುದು ಇದುವರೆಗೆ ಕಂಡು ಬಂದಿದೆ. ಇವರು ಕನಕದಾಸ, ಚೆನ್ನಿಗ ಮತ್ತು ಬಬ್ಬೂರುರಂಗ. ಕನಕದಾಸನ ಕಾಲವನ್ನು ಸುಮಾರು ೧೫೫೦ ಎಂದು ಗೊತ್ತುಪಡಿಸಲಾಗಿದೆ. ಹಾಗಾಗಿ ಕುಮಾರ ವಾಲ್ಮೀಕಿಯನ್ನು ಸ್ಮರಿಸಿದ ಮೂವರಲ್ಲಿ ಈತನೇ ಹಿರಿಯನೆನಿಸಿದ್ದಾನೆ. ಕನಕದಾಸನ ಸ್ಮರಣೆಯಿಂದ ಅವನ ಕಾಲಕ್ಕಾಗಲೇ ಕುಮಾರವಾಲ್ಮೀಕಿಯ ಕೃತಿ ಪ್ರಸಿದ್ಧಿ ಪಡೆದಿತ್ತೆಂಬುದು ತಿಳಿಯುತ್ತದೆ. ಆದ್ದರಿಂದ ಕನಕದಾಸನಿಗಿಂತ ಮೊದಲು ಕುಮಾರ ವಾಲ್ಮೀಕಿ ಇದ್ದನೆಂದು ತಿಳಿಯ ಬಹುದಾಗಿದೆ. ಈತನ ಕಾಲನಿರ್ಣಯದ ಚರ್ಚೆಯಲ್ಲಿ ಕನಕದಾಸನ ಕಾಲವನ್ನು ಉತ್ತರದ ಗಡುವನ್ನಾಗಿ ಇಟ್ಟುಕೊಳ್ಳಲಾಗಿದೆ. ಕುಮಾರವಾಲ್ಮೀಕಿ ಸ್ಮರಿಸಿದವರಲ್ಲಿ ಕುಮಾರವ್ಯಾಸ ತೀರ ಈಚಿನವನಾಗಿದ್ದು ಈತನ ಕಾಲವನ್ನು, ಅಂದರೆ ಸುಮಾರು ೧೪೦೦ನ್ನು ಪೂರ್ವದ ಗಡುವನ್ನಾಗಿ ಇಟ್ಟುಕೊಂಡು ಈ ನಡುವಣ ಸುಮಾರು ೧೫೧ ವರ್ಷಗಳ ಅವಧಿಯಲ್ಲಿ, ಸುಮಾರು ೧೫೦೦ರಲ್ಲಿ, ಕುಮಾರವಾಲ್ಮೀಕಿ ಕೃತಿರಚನೆ ಮಾಡಿರಬಹುದೆಂಬ ಒಂದು ಸಾಧಾರಣ ನಿಲುವಿಗೆ ವಿದ್ವಾಂಸರು ಬಂದಿದ್ದಾರೆ. ಈ ಕಾಲವನ್ನು ಸೂಚಿಸಿದವರಲ್ಲಿ ಆರ್. ನರಸಿಂಹಾಚಾರ್, ಇ.ಪಿ. ರೈಸ್, ಎಸ್.ಕೆ. ಕುಲಕರ್ಣಿ, ಕೆ. ವೆಂಕಟರಾಮಪ್ಪ, ತ.ಸು. ಶಾಮರಾವ್, ಎಲ್. ಬಸವರಾಜು ಮತ್ತು ಎಸ್. ಬಸವಾರಾಧ್ಯರು ಮುಖ್ಯರು. ರಂ. ಶ್ರೀ. ಮುಗಳಿ ಅವರು ೧೬ನೇ ಶತಮಾನದೊಳಗೆ ಕುಮಾರವ್ಯಾಸನ ತರುವಾಯ, ಕುಮಾವಾಲ್ಮೀಕಿ ಇದ್ದನೆಂದು ಸದ್ಯಕ್ಕೆ ಹೇಳಿದರೆ ಎಲ್ಲರೂ ಒಪ್ಪುವಂತಿದೆ ಎಂದಿದ್ದಾರೆ.

### 4.4.2 ದೇಶ

ವಿಜಾಪುರದ ಬಳಿಯ ತೊರವೆಯಲ್ಲಿ ಕುಮಾರವಾಲ್ಮೀಕಿಯ ವಂಶಸ್ಥರು ಇನ್ನೂ ಇದ್ದಾರೆಂದು ಹೇಳಲಾಗಿದೆ. ಈತ ತೊರವೆಯ ನರಸಿಂಹ ದೇವರ ಭಕ್ತನಾಗಿದ್ದು, ಆ ದೇವರ ಅಂಕಿತದಲ್ಲಿಯೇ ಕೃತಿ ರಚನೆ ಮಾಡಿದ್ದಾನೆ. ಆದ್ದರಿಂದ ಈತ ಈ ಪ್ರಾಂತ್ಯಕ್ಕೆ ಸೇರಿದವನೆನ್ನಲು ಅಡ್ಡಿಯಿಲ್ಲ. 'ಕುಮಾರವಾಲ್ಮೀಕಿ'ಎಂಬುದು ಕವಿಯ ಕಾವ್ಯನಾಮವೇ ಹೊರತು ನಿಜನಾಮವಾಗಿರಲು ಸಾಧ್ಯವಿಲ್ಲ. ಈತನ ನಿಜವಾದ ಹೆಸರು ನರಹರಿ ಎಂದಿರಬಹುದೆಂಬುದು ಒಂದು ಅಭಿಪ್ರಾಯ. ಇದರ ಬಗೆಗೆ ಹೀಗೆಯೇ ಎಂದು ಹೇಳಲು ಬರುವುದಿಲ್ಲ. ಈತನು ಕುಮಾರವ್ಯಾಸನ ಭಾಗವತ ಪರಂಪರೆಯಿಂದ ಪ್ರಭಾವಿತನಾಗಿ ಆ ಪರಂಪರೆಯಲ್ಲಿಯೇ ಕೃತಿರಚನೆ ಮಾಡಿದವನಾದ್ದರಿಂದ 'ತೊರವೆಯ ನರಸಿಂಹನ ಭಕ್ತನಾಗಿದ್ದ

ಸ್ಮಾರ್ತಭಾಗವತ ಕವಿ' ಎಂದು ಗ್ರಹಿಸಲಾಗಿದೆ. ಮಧ್ವಾಚಾರ್ಯರನ್ನು 'ಗುರುರಾಯ'ಎಂದು ಸ್ತುತಿಸಿರುವುದರಿಂದಲೂ ಮಾಧ್ವ ತತ್ವದ ಪ್ರಭಾವಿವಿರುವುದರಿಂದಲೂ ಈತ ಮಾಧ್ವನೆಂದೂ ಅಭಿಪ್ರಾಯಪಡಲಾಗಿದೆ. ಆದರೆ ಈ ಬಗೆಗೆ ಹೆಚ್ಚಿನ ಚರ್ಚೆ ನಡೆದು ನಿರ್ಣಯಕ್ಕೆ ಬಂದಂತೆ ಕಾಣುವುದಿಲ್ಲ. ಕುಮಾರವ್ಯಾಸ ಯಾವುದೇ ರಾಜಾಶ್ರಯವನ್ನು ಪಡೆಯದೆ ಗದುಗಿನ ವೀರನಾರಾಯಣನ ಭಕ್ತನಾಗಿದ್ದು ಸಂತ ಜೀವನ ನಡೆಸುತ್ತಾ ಕೃತಿ ರಚಿಸಿದಂತೆ ಕುಮಾರವಾಲ್ಮೀಕಿಯೂ ರಾಜಾಶ್ರಯ ಪಡೆಯದೆ ಸ್ವತಂತ್ರನಾಗಿದ್ದು ಕೃತಿ ರಚಿಸಿದಂತೆ ಕೃತಿರಚನೆ ಮಾಡಿರಬೇಕೆಂದು ಅಭಿಪ್ರಾಯ ಪಡಲಾಗಿದೆ.

### 4.4.3 ಕೃತಿಗಳು

ತೊರವೆ ನರಹರಿ ಎಂದೂ, ಕುಮಾರವಾಲ್ಮೀಕಿ ಎಂದೂ ಪ್ರಸಿದ್ಧನಾಗಿರುವ ಈ ಕವಿ 'ತೊರವೆ ರಾಮಾಯಣ'ಎಂಬ ಕಾವ್ಯವನ್ನು ರಚಿಸಿದ್ದಾನೆಂಬುದನ್ನು ಎಲ್ಲರೂ ಒಪ್ಪುತ್ತಾರೆ. 'ಮೈರಾವಣ ಕಾಳಗ'ಎಂಬು ಇನ್ನೊಂದು ಕೃತಿಯನ್ನೂ ರಚಿಸಿದ್ದಾನೆಂದು ಕೆಲವರು ಅಭಿಪ್ರಾಯಪಟ್ಟಿದ್ದಾರೆ. ಮುಗಳಿ 'ಅವನು (ಕುಮಾರವಾಲ್ಮೀಕಿ) 'ತೊರವೆ ರಾಮಾಯಣ' 'ಐರಾವಣ ಕಾಲಗ' ಎಂಬ ಎರಡು ಗ್ರಂಥಗಳನ್ನು ರಚಿಸಿದ್ದಾನೆ' ಎಂದು ಸ್ಪಷ್ಟವಾಗಿ ನುಡಿದಿದ್ದಾರೆ. ಬಿ.ಎಸ್. ಸಣ್ಣಯ್ಯನವರು ' 'ಮೈರಾವಣನ ಕಾಳಗ' ಮತ್ತು 'ಕಪೋತ ಚರಿತೆ'ಗಳ ಶೈಲಿಗೂ ತೊರವೆ ರಾಮಾಯಣದ ಶೈಲಿಗೂ ವ್ಯತ್ಯಾಸ ಕಂಡುಬರುವುದರಿಂದ ಇವೆರಡನ್ನೂ ಕುಮಾರವಾಲ್ಮೀಕಿಯೇ ರಚಿಸಿದ್ದನೋ ಇಲ್ಲವೋ ಎಂಬುದನ್ನು ವಿಚಾರಮಾಡಬೇಕಾಗಿದೆ'ಎಂದಿದ್ದಾರೆ. 'ಮೈರಾಣ ಕಾಳಗ'ದ ಕವಿ ಕೃತಿಯಲ್ಲಿ ತನ್ನ ಹೆಸರು ನರಹರಿ ಎಂದು ಹೇಳಿರುವುದು, 'ತೊರವೆ ರಘುನಾಥ'ನನ್ನು ಅಂಕಿತವನ್ನಾಗಿ ಮಾಡಿರುವುದು, ವಿದ್ಯಾ ಶಂಕರರನ್ನು ಗುರುವೆಂದು ಸ್ಮರಿಸಿರುವುದು, 'ತೊರವೆ ರಾಮಾಯಣ'ದ ಕವಿ ಕೃತಿಯಲ್ಲಿ ತನ್ನ ನಿಜನಾಮವೇನೆಂದು ಹೇಳದಿರುವುದು, 'ತೊರವೆ ನರಹರಿ'ಯನ್ನು ಅಂಕಿತಗೊಳಿಸಿರುವುದು, ಮಧ್ವಾಚಾರ್ಯರನ್ನು ಗುರುವೆಂದು ಸ್ಮರಿಸಿರುವುದು. ಈ ಅಂಶಗಳನ್ನು ತಾಳೆ ಹಾಕಿದ ಹೊಸಬೆಟ್ಟು ಸೀತಾರಾಮಾಚಾರ್ಯರು 'ಇವೆಲ್ಲ ಅಂಶಗಳು ಆ ಎರಡು ಕೃತಿಗಳು ಭಿನ್ನ ಕರ್ತೃತ್ವದವುಗಳೆನ್ನುವುದನ್ನು ಸಿದ್ಧಪಡಿಸುತ್ತವೆ'ಎಂದಿದ್ದಾರೆ. ಸದ್ಯಕ್ಕೆ 'ತೊರವೆ ರಾಮಾಯಣ'ಕುಮಾರವಾಲ್ಮೀಕಿ ರಚಿಸಿದ ಏಕೈಕ ಕೃತಿ ಎಂದು ತಿಳಿದು ಮುನ್ನಡೆಯಲಾಗಿದೆ.

### 4.4.4 ತೊರವೆ ರಾಮಾಯಣ

ತೊರವೆ ರಾಮಾಯಣ ಭಾಮಿನೀಷಟ್ಪದಿಯಲ್ಲಿ ನಡುಗನ್ನಡ ಭಾಷಾ ಶೈಲಿಯಲ್ಲಿ ರಚಿತವಾಗಿರುವ ಕೃತಿ. ಇದರಲ್ಲಿ ೫೦೦೦ಕ್ಕೂ ಹೆಚ್ಚಿನ ಪದ್ಯಗಳು, ೧೧೨ ಸಂಧಿಗಳು, ೬ ಕಾಂಡಗಳು ಇವೆ. ಇದರಲ್ಲಿ ರಾಮ ಪಟ್ಟಾಭಿಷೇಕದವರೆಗೆ ಮಾತ್ರ ಕಥೆ ಇದೆ. ತನಗೆ ಅನುಸರಣೀಯನಾದ ಕವಿ ಕುಮಾರವ್ಯಾಸನು ಧರ್ಮರಾಯನ ಪಟ್ಟಾಭಿಷೇಕದೊಂದಿಗೆ ತನ್ನ ಕಾವ್ಯಕ್ಕೆ ಮಂಗಲ ಹಾಡಿದ ಆದರ್ಶವು ಇವನ ಗಮದಲ್ಲಿ ಇದ್ದಿರಬಹುದು.

'ರಘುವರ ಕಥಾ ವಿಮಲೋದಧೀಂದು ಮಹಾಮುನಿಪ್ರಾಚೇತಸಂ ವಂದೇ' ಎಂದು ವಾಲ್ಮೀಕಿಯನ್ನು ಕುಮಾರ ವಾಲ್ಮೀಕಿ ವಂದಿಸಿದ್ದಾನೆ. ವ್ಯಾಸ ಭಾರತವನ್ನು ಆಧರಿಸಿ ಕಾವ್ಯ ರಚನೆ ಮಾಡಿದ ಕವಿ ವ್ಯಾಸರ ಮೇಲಿನ ಗೌರವದಿಂದಲೂ ಕೃತಜ್ಞತೆಯಿಂದಲೂ ತನ್ನನ್ನು ಕುಮಾರವ್ಯಾಸ ಎಂದು ಕರೆದುಕೊಂಡಂತೆ ಈ ಕವಿಯೂ ವಾಲ್ಮೀಕಗಳ ಮೇಲಿನ ತನ್ನ ಗೌರವವನ್ನೂ ಕೃತಜ್ಞತೆಯನ್ನೂ ಸೂಚಿಸುವ ಸಲುವಾಗಿ ತನ್ನನ್ನು ಕುಮಾರವಾಲ್ಮೀಕಿ ಎಂದು ಕರೆದುಕೊಂಡಿದ್ದಾನೆ. ಜೊತೆಗೆ ಕುಮಾರವಾಲ್ಮೀಕಿಯ ಕಾವ್ಯ ತನ್ನ ಕಥಾ ಸರಣಿಯಲ್ಲಿ ವಾಲ್ಮೀಕಿ ರಾಮಾಯಣವನ್ನು ಹೆಚ್ಚು ಅನುಸರಿಸಿದೆ. ಈ ಎಲ್ಲ ಅಂಶಗಳಿಂದ ಕುಮಾರವಾಲ್ಮೀಕಿ ವಾಲ್ಮೀಕಿ ರಾಮಾಯಣವನ್ನು ಆಕರವಾಗಿ

ಇಟ್ಟುಕೊಂಡಿದ್ದಾನೆ ಎಂಬುದು ಸ್ಪಷ್ಟವಾಗುತ್ತದೆ. 'ವಾಲ್ಮೀಕಿ ರಾಮಾಯಣದ ಎಲ್ಲ ಕಾಂಡಗಳನ್ನು ಮೊದಲನೆಯ ಸಲ ಅನುವಾದಿಸಿದ ಕನ್ನಡ ಕಾವ್ಯ'ಎಂದು ಮುಗಳಿಯವರು ಹೇಳಿದ್ದಾರೆ. ಜೊತೆಗೆ ಕಥಾನಕದಲ್ಲಿ ಅದ್ಭುತ ರಾಮಾಯಣದ ವರ್ಚಸ್ಸು ಇರುವುದನ್ನೂ, ಆನಂದ ರಾಮಾಯಣ ಆಧ್ಯಾತ್ಮ ರಾಮಾಯಣಗಳ ಪ್ರೇರಣೆಯಾಗಿರುವುದನ್ನೂ ವಿದ್ವಾಂಸರು ಗುರುತಿಸಿದ್ದಾರೆ.

ವಾಲ್ಮೀಕಿ ರಾಮಾಯಣದ ಬಾಲಕಾಂಡದಿಂದ ಯುದ್ಧಕಾಂಡದವರೆಗಿನ ಸುಪ್ರಸಿದ್ಧ ರಾಮಕಥೆಯೇ ತೊರವೆ ರಾಮಾಯಣದ ಕಥಾವಸ್ತು ರಾಮಾದಿಗಳ ಜನನಕ್ಕಾಗಿ ದಶರಥ ನಡೆಸುವ ಪುತ್ರಕಾಮೇಷ್ಠಿಯಾಗದಿಂದ ಹಿಡಿದ್ದ, ರಾವಣವಧೆಯ ನಂತರ ಸೀತಾಸಮೇತನಾದ ರಾಮನ ಪಟ್ಟಾಭಿಷೇಕದವರೆಗಿನ ಕಥೆ ಇದರಲ್ಲಿ ನಿರೂಪಿತವಾಗಿದೆ. ಕುಮಾರವಾಲ್ಮೀಕಿ ಅಲ್ಲಲ್ಲಿ ಸಣ್ಣಪುಟ್ಟ ವ್ಯತ್ಯಾಸಗಳ ಹೊರತು ಮೂಲದ ಯಥಾವತ್ತಾದ ಸಂಗ್ರಹಾನುವಾದವನ್ನು ತನ್ನ ಕೃತಿಯಲ್ಲಿ ಮಾಡಿದ್ದಾನೆ.

### 4.4.5 ಪಾತ್ರ ಸನ್ನಿವೇಶ

ವಾಲ್ಮೀಕಿ ರಾಮಾಯಣದಲ್ಲಿ ದೊರೆಯುವ ಮಾನವೀಯ ಅಂತರಂಗದ ಚಿತ್ರಣ, ಸಂಕೀರ್ಣತೆ, ವೈವಿಧ್ಯ, ಸಂಘರ್ಷಗಳನ್ನು ತೊರವೆ ರಾಮಾಯಣದಲ್ಲಿ ನಿರೀಕ್ಷಿಸಲು ಬರುವುದಿಲ್ಲ. ಏಕೆಂದರೆ ಇಲ್ಲಿನ ಎಲ್ಲ ಪಾತ್ರಗಳೂ 'ದಿವ್ಯ ಲೀಲಾವಿನೋದಿ'ಯಾದ ಶ್ರೀರಾಮನ ಮೇಲಿನ ಭಕ್ತಿ ಪಾಶಕ್ಕೆ ಸಿಲುಕಿದ ಸೂತ್ರದ ಬೊಂಬೆಗಳಾಗಿವೆ. ಅವುಗಳಿಗೆ ಅವುಗಳದೇ ಆದ ಅಸ್ತಿತ್ವವಿಲ್ಲ, ಸ್ವಾತಂತ್ರ್ಯವಿಲ್ಲ. ಮಂಥರೆಯಂಥವಳೂ ಇಲ್ಲಿ 'ಮಾಯಾವತಾರಣಿ'ಯಾಗಿ ಚಿತ್ರಿತವಾಗಿದ್ದಾಳೆ. ಆಕೆಯು ರಾಮನನ್ನು ಕಾಡಿಗೆ ಕಳಿಸುವಂತೆ ಕೈಕೇಯನ್ನು ಪ್ರಚೋದಿಸುವುದು ರಾವಣವಧೆಯ ಉದ್ದೇಶದಿಂದಲೇ, ಆದಿ ಕಾವ್ಯದಲ್ಲಿ ದೈತ್ಯ ಮನೋವೃತ್ತಿಯವರಾಗಿ ಚಿತ್ರಿತರಾದ ರಾವಣ, ಕುಂಭಕರ್ಣ, ಅತಿಕಾಯ, ಇಂದ್ರಜಿತು-ಎಲ್ಲರೂ ಈ ಕೃತಿಯಲ್ಲಿ ರಾಮನ ದಿವ್ಯತೆಯನ್ನು ಕಂಡುಕೊಂಡ ಪುಣ್ಯಜೀವಿಗಳು. ಪ್ರಾರಂಭದಲ್ಲಿ ಆಸುರದ ವಿಕಾರ ಮೂರ್ತಿಯಾಗಿ, ದೈವ ಧರ್ಮ ವಿರೋಧಿಯಾಗಿ ಚಿತ್ರಿತನಾದ ರಾವಣನು ಕೊನೆಯಲ್ಲಿ ಅನಿರೀಕ್ಷಿತವೆಂಬಂತೆ ದೈವದ ಅಂತರಂಗದ ಭಕ್ತನಾಗಿ, ದೈವಾನುಗ್ರಹ ರೂಪವಾದ ವಿಶ್ವರೂಪದರ್ಶನ ಭಾಗ್ಯವನ್ನು ಹೊಂದಿ ಧನ್ಯನಾಗುತ್ತಾನೆ. ದ್ವೇಷವು ಗುಪ್ತ ಭಕ್ತಿಯಾಗಿ ಪರಿವರ್ತಿತವಾದ ಸ್ಥಿತಿಯಲ್ಲಿ ರಾವಣನಿಗೆ ಮುಕ್ತಿಯ ಗತಿ ಕಾಣಿಸಿಕೊಳ್ಳುತ್ತದೆ.

ತೊರವೆ ರಾಮಾಯಣದ ಅತಿಕಾಯ ಮಹಾವೈಷ್ಣವ, ವೀರಶ್ರೀ-ಭಕ್ತಿಶ್ರೀಗಳ ಸಂಗಮ. ವೈಷ್ಣವಶಿರೋಮಣಿಯಾದ ಅತಿಕಾಯನಿಗೆ ಯುದ್ಧರಂಗ ವಿಜಯ ಭೂಮಿಯಾಗಿರದೆ ಮೋಕ್ಷಶ್ರೀಯ ಸ್ವಯಂವರ ಮಂಟಪವಾಗಿ ಕಾಣಿಸಿಕೊಳ್ಳುತ್ತದೆ. ತುಳಸಿಯ ದಂಡೆಯನ್ನು ಶಿರದಲ್ಲಿ ಅಲಂಕರಿಸಿಕೊಂಡು ಲಲಾಟದಲ್ಲಿ 'ಊರ್ಧ್ವತಿಲಕ'ವನ್ನು ಧರಿಸಿಕೊಂಡು ಯುದ್ಧಕ್ಕೆ ನಡೆದು ಸರಳುಗಳ ಮೂಲಕ 'ಸಮರ ಮುಖ ಸಂಭಾವನೋಚಿತ ಸರಳ ಭಕ್ತಿ'ಯನ್ನು ಮೆರೆದ ವೀರವೈಷ್ಣವ ಆತ್ಮ ನಿವೇದಕ ಅತಿಕಾಯ ಪಾತ್ರವು ಕುಮಾರವಾಲ್ಮೀಕಿಯದೇ ಕಲ್ಪನೆ.

ಮಾನವ ಲೋಕದ ಸಹಜವಾದ ಸುಖ-ದುಃಖ, ಅನಿವಾರ್ಯವಾದ ಜೀವನ ದ್ವಂದ್ವಗಳನ್ನು ಎದುರಿಸುವ ಸ್ವಂತಿಕೆಯುಳ್ಳ ಪಾತ್ರಗಳನ್ನು ಕುಮಾರವಾಲ್ಮೀಕಿ ಚಿತ್ರಿಸುವುದು ಸಾಧ್ಯವಾಗಿಲ್ಲ. ಪಾತ್ರ ಚಿತ್ರಣಕ್ಕೆ ಮಹತ್ವದ ಉಪಕರಣಗಳಾಗಿ ನೆರವಾಗುವ ಸಂಭಾಷಣೆ, ಸಂವಾದಗಳಿಗೂ ಇಲ್ಲಿ ಅವಕಾಶ ಸಿಗದೇ ಹೋಗಿದೆ. ವಾಲ್ಮೀಕಿ ರಾಮಾಯಣದಲ್ಲಿ ನಮ್ಮ ಮನ ಸೆಳೆಯುವ ಮಾನವ ಜೀವನ ಸಹಜವಾದ ದಶರಥ-ಜನಕ, ದಶರಥ-ರಾಮ ರಾಮ-ಕೌಸಲ್ಯೆ, ದಶರಥ-ಕೈಕೇಯಿ, ಭರತ-ಕೌಸಲ್ಯೆ ಇವರೊಳಗಿನ ಸಂಭಾಷಣೆಗಳ ಕಡೆಗೆ ಕುಮಾರವಾಲ್ಮೀಕಿ ಗಮನಹರಿಸಿಲ್ಲ. ಇವನ ಕೃತಿಯಲ್ಲಿ ಪಾತ್ರ, ಸನ್ನಿವೇಶ ಎಲ್ಲವೂ ದಿವ್ಯಾವೇಶಕ್ಕೆ ಒಳಗಾಗಿ ಒಂದೇ ರಾಗ, ಒಂದೇ ತಾಳ ಎನ್ನುವಂತೆ ಆಗಿದೆ. ಕಾವ್ಯದೃಷ್ಟಿಯಿಂದ ಅಮುಖ್ಯವೂ, ಕಾವ್ಯ ಸೌಂದರ್ಯ ದೃಷ್ಟಿಯಿಂದ ಅನುಚಿತವೂ, ಪುನರುಕ್ತವೂ ಆದ ಹಲವಾರು ಘಟನೆಗಳಿಂದಲೂ

ವರ್ಣನೆಗಳಿಂದಲೂ ಕಿಕ್ಕಿರಿದ ಯುದ್ಧಕಾಂಡವು ಅಯೋಧ್ಯಾಕಾಂಡದ ಹನ್ನೊಂದು ಮಡಿಯಷ್ಟು ಹಿಗ್ಗಿರುವುದರಿಂದ ಹಿತ-ಮಿತ ಕಾವ್ಯ ಸೌಷ್ಠವ, ಸೌಂದರ್ಯ ಇಲ್ಲಿ ಕಾಣದಾಗಿದೆ. ಹನುಮಂತನು ಕುಂಭಕರ್ಣನ ಮೂಗಿನ ಸಿಂಬಳದಲ್ಲಿ ಸಿಕ್ಕಿ ಒದ್ದಾಡಿದನೆಂಬ ಕಥೆ, ಸೇತುಬಂಧನಕ್ಕಾಗಿ ಕಪಿಗಳು ಪ್ರಪಂಚವನ್ನು ಪರ್ವತರಹಿತಗೊಳಿಸಿದ್ದಲ್ಲದೆ ಕೈಲಾಸ, ಸತ್ಯಲೋಕಗಳಿಗೂ ಧಾಳಿಯಿಟ್ಟರೆಂಬ ಉಲ್ಲೇಖ, ಮಹಾವೀರನೆಂದು ವರ್ಣಿತನಾದ ರಾವಣ ನೀಲನ ಬಾಲಕ್ಕೆ ಕಟ್ಟುಬಿದ್ದು ಬೋಗುಳ ಹಾಡಿಸಿಕೊಂಡು ಚಿತ್ರಣ-ಇವೆಲ್ಲ ಕಾವ್ಯವನ್ನು ಕೇವಲ ಪುರಾಣವಾಗಿಸಿವೆ ಅಷ್ಟೇ.

## 4.4.6 ಭಾಷೆ ಶೈಲಿ

ಕುಮಾರವಾಲ್ಮೀಕಿಯ ಶಬ್ದಸಂಪತ್ತು ದೊಡ್ಡದು. ನಿರರ್ಗಳವಾಗಿ ಮುನ್ನಡೆಯುವ ಅವನ ಕಾವ್ಯವು ಪದರಮ್ಯತೆಯಿಂದ ನಮ್ಮನ್ನು ತೇಲಿಸಿಕೊಂಡು ಹೋಗುತ್ತದೆ. ಇಲ್ಲಿ ವ್ಯಂಗ್ಯಕ್ಕಿಂತಲೂ ವಾಚ್ಯಕ್ಕೆ ಪ್ರಾಧಾನ್ಯ. ಅರ್ಥವ್ಯಕ್ತಿಯೇ ಕುಮಾರವಾಲ್ಮೀಕಿಯ ಅಭಿವ್ಯಕ್ತಿಯ ಮುಖ್ಯ ಗುಣ ಮತ್ತು ಶಕ್ತಿ. ಆದರೆ ಅದು ಅತಿಯಾದಾಗ ದೋಷವೆನಿಸುವುದೂ ಉಂಟು. ಕುಮಾರವ್ಯಾಸನಂತೆಯೇ ಹಿರಿಯ ಶಬ್ದ ಭಂಡಾರವುಳ್ಳ ಈ ಕವಿಯು ಅವನಂತೆಯೇ ಶಬ್ದಗಳಲ್ಲಿ 'ಧ್ವನಿ' ತುಂಬಿ ಬಳಸುವ ಕಲೆಯನ್ನು ಸಿದ್ಧಿಸಿಕೊಂಡಿದ್ದರೆ ಕನ್ನಡದ ಈ ರಾಮಾಯಣವೂ ಕನ್ನಡ ಭಾರತದ ಎತ್ತರವನ್ನು ಏರುತ್ತಿತ್ತು.

ಗೋನಾಳಿಯನು ಗೋರು, ಮೂಗುಬ್ಬಸವ ಮಾಡು, ಮೂಗಕ್ಕೆಯಲಿ ಮರುಗು-ಹೀಗೆ ಅಚ್ಚಗನ್ನಡದ ಚೆಲುವನ್ನು ಬೆಳಗಿದ ಕವಿ ವಾರ್ಧಕ ಕಲಾವಿಕೃತಾಕವಿತ, ಮಹಾ ದಿವೌಕಸ ಪ್ರಚುರ ಭಾಷಾ ಜನೋತ್ತಂಸ, ಅರುಣಪಟ ಪರಿಧಾನ ಶೌರ್ಯಾಭರಣ-ಇಂತಹ ಪ್ರಯೋಗಗಳಲ್ಲಿ ಸಂಸ್ಕೃತಪಾಂಡಿತ್ಯವನ್ನು ಮೆರೆದಿದ್ದಾನೆ ಲೋಕಾನುಭವ ಸಾರದಂತಿರುವ ನಾಣ್ನುಡಿಗಳು ಕೂಡ ಕಾವ್ಯದಲ್ಲಿ ಸಾಲುಗಟ್ಟಿ ಬಂದಿವೆ; ಕಾಲಗೆ ಕರುಣೆಯಿಲ್ಲ, ಬಸಿದ ಶೂಲಕೆ ಪವಣನನು ಸೇರಿಸು, ಮರುಳಿಗೆತ್ತಣ ಮಂಡನವು -ಇತ್ಯಾದಿ.

ಕುಮಾರವಾಲ್ಮೀಕಿಯ ವರ್ಣನೆಗಳಲ್ಲಿ ಕವಿಸಮಯವೇ ತುಂಬಿಕೊಂಡಿದ್ದು, ಎದ್ದು ಕಾಣುವ ಹೊಸತನವೇನೂ ಇಲ್ಲ. ಪರಿಮಿತತ್ವ ಮತ್ತು ಅರ್ಥವ್ಯಕ್ತಿಗಳಿಂದಾಗಿ ಅವು ನಮ್ಮನ್ನು ತಣಿಸುತ್ತವೆ, ದಣಿಸುವುದಿಲ್ಲ. ವಾಲ್ಮೀಕಿ ರಾಮಾಯಣದ ಒಟ್ಟು ಪದ್ಯಗಳಲ್ಲಿ ಶೇಕಡಾ ೬೦ ರಷ್ಟು ಪದ್ಯಗಳು ಅಲಂಕಾರಗಳಿಂದ ಕೂಡಿವೆ. ಆದರೆ ಪಂಡಿತಪ್ರಿಯವಾದ ಶ್ಲೇಷ, ಅಪಹುತಿ ಮೊದಲಾದ ಅಲಂಕಾರಗಳಿಗೆ ಇಲ್ಲಿ ಎಡೆ ದೊರೆತಿಲ್ಲ. ಇರುವ ಅಲಂಕಾರಗಳಲ್ಲಿ ಹೊಸತನ, ಸ್ವಂತಿಕೆಯೂ ಅಷ್ಟಾಗಿ ಕಾಣುವುದಿಲ್ಲ. ಜನಸಾಮಾನ್ಯರನ್ನು ದೃಷ್ಟಿಯಲ್ಲಿಟ್ಟುಕೊಂಡು ರಾಮನಾಮ ಮಹಿಮೆಯ ಪ್ರಸಾರವನ್ನು ಉದ್ದೇಶವಾಗಿರಿಸಿಕೊಂಡ ಕವಿಗೆ ಅದು ಮುಖ್ಯವಾಗಿರಲಿಲ್ಲವೆಂದು ತೋರುತ್ತದೆ.

## 4.4.7 ಕೃತಿಯ ಮಹತ್ವ

ತೊರವೆ ರಾಮಾಯಣವು ಸತ್ವದ ದೃಷ್ಟಿಯಿಂದ ಕುಮಾರವ್ಯಾಸ ಭಾರತದಷ್ಟು ಎತ್ತರಕ್ಕೆ ಹೋಗದಿದ್ದರೂ ಸ್ವಲ್ಪ ಹೆಚ್ಚೂ ಕಡಿಮೆ ಅಷ್ಟೇ ಜನಪ್ರಿಯತೆಯನ್ನು ಗಳಿಸಿದೆ. ಇದರ ಜನಪ್ರಿಯತೆಗೆ ಕಾರಣ ಸಾಮಾನ್ಯ ಸಹೃದಯನೂ ಓದಿ ಅರ್ಥಮಾಡಿಕೊಳ್ಳುವಷ್ಟು ಸುಲಭವಾಗಿರುವ ಈ ಕಾವ್ಯ ಸರಳ ಶೋಭೆಯಿಂದ ಕೂಡಿರುವುದು. ವರ್ಣನಾವೈವಿಧ್ಯವಿಲ್ಲವೆಂದೆನಿಸಿದರೂ ಹೃದಯಂಗಮವಾದ ಭಾವಗಳು ಬಂದು ಈ ಕೊರತೆಯನ್ನು ಮರೆಯುವಂತೆ ಮಾಡಿದೆ. ಕಥಾ ವಸ್ತುವು ಸುಪ್ರಸಿದ್ಧವೂ ಸ್ವಾರಸ್ಯಕರವೂ ಆಗಿರುವುದರಿಂದ ಈ ಕೃತಿ ಸಹೃದಯರನ್ನು ಆಕರ್ಷಿಸಿ ತಣಿಸುವಷ್ಟು ಶಕ್ತಿಯುಳ್ಳದ್ದಾಗಿದೆ. ಅಂತಲೇ ಕನ್ನಡ ಗಮಕಕಲೆಯನ್ನು ಪ್ರೋತ್ಸಾಹಿಸುವಲ್ಲಿ ಈ ಕೃತಿ ತನ್ನದೇ ಆದ ಪಾತ್ರವನ್ನು ನಿರ್ವಹಿಸಿದೆ.

ವಾಲ್ಮೀಕಿ ರಾಮಾಯಣವನ್ನು ಕನ್ನಡಿಸುವಲ್ಲಿ ಕುಮಾರವಾಲ್ಮೀಕಿ ಭಕ್ತಿಯನ್ನೂ ನಿಷ್ಠೆಯನ್ನೂ ತೋರಿದಷ್ಟು ಕವಿತಾಶಕ್ತಿಯನ್ನು ತೋರಿಲ್ಲ. ಅವನ ಬರವಣಿಗೆ ಉಜ್ವಲವಾಗಿ ಏರೇರುತ್ತಾ ಹೋಗುವುದಿಲ್ಲ. ಬಹುಮಟ್ಟಿಗೆ ಒಂದು ಸಾಂಪ್ರದಾಯಿಕ ಗಾಯನದಂತೆ ತೋರುತ್ತದೆ. ಅವನ ವೇಗ ಕೆಲವು ಸಲ ರಸಭಂಗಕ್ಕೆ ಕಾರಣವಾಗುತ್ತದೆ. ಒಟ್ಟಿನಲ್ಲಿ ಕುಮಾರ ವಾಲ್ಮೀಕಿಯ ಪ್ರತಿಭೆ ಮಧ್ಯಮ ದರ್ಜೆಯದಾದುದರಿಂದ ಅವನ ಕಥನ ಕಲೆಯಲ್ಲಿ ಮಧ್ಯಮ ಗುಣವೆ ತೋರಿದೆ. ಕುಮಾರವ್ಯಾಸನಂತೆ ಭಾರತೀಯ ಪರಂಪರೆಯಲ್ಲಿ ಪರಮಪೂಜ್ಯವಾದ ಗ್ರಂಥವನ್ನು ಕುಮಾರವಾಲ್ಮೀಕಿ ಅನುವಾದಕ್ಕೆಂದು ಆರಿಸಿದನು. ಅವನ ಹಾಗೆ ಭಾಗವತದೃಷ್ಟಿಯನ್ನು ಬೆಳೆಸಿಕೊಂಡನು. ಆದರೆ ಅವನ ಅಸಾಧಾರಣ ಪ್ರತಿಭೆಯಿಲ್ಲದ ಕಾರಣ ಮಹಾ ಕೃತಿಯನ್ನು ಈತ ನಿರ್ಮಿಸಲಿಲ್ಲ.

['ಕನ್ನಡ ಸಾಹಿತ್ಯಚರಿತ್ರೆ' ಪಾಠಗಳನ್ನು ಹೆಚ್ಚಾಗಿ ಬಳಸಿಕೊಳ್ಳಲಾಗಿದೆ]

## 4.5 ಸ್ವಪರೀಕ್ಷಾ ಪ್ರಶ್ನೆಗಳು

1. ಕುಮಾರವ್ಯಾಸನ ಕಾಲ ಯಾವುದು?

..........................................................................................................

..........................................................................................................

2. ಕುಮಾರವ್ಯಾಸನ ಕೃತಿಯ ಹೆಸರೇನು?

..........................................................................................................

..........................................................................................................

3. ಕುಮಾರವ್ಯಾಸ ಭಾರತದ ಛಂದಸ್ಸು ಯಾವುದು?

..........................................................................................................

..........................................................................................................

4. ಚಾಮರಸನ ಕಾಲ ಯಾವುದು?

..........................................................................................................

..........................................................................................................

5. ಚಾಮರಸನ ಕೃತಿಯ ಹೆಸರೇನು?

..........................................................................................................

6. ಪ್ರಭುಲಿಂಗಲೀಲೆಯಲ್ಲಿ ಬರುವ ಮುಖ್ಯ ಪಾತ್ರಗಳನ್ನು ಹೆಸರಿಸಿ.

..........................................................................................................

..........................................................................................................

..........................................................................................................

7. ಕುಮಾರವಾಲ್ಮೀಕಿಯ ಕಾಲ ಯಾವುದು?

.................................................................................................................................

.................................................................................................................................

8. ಕುಮಾರವಾಲ್ಮೀಕಿಯ ಕೃತಿ ಹೆಸರೇನು?

.................................................................................................................................

.................................................................................................................................

9. ಕುಮಾರವಾಲ್ಮೀಕಿ ಎಂದು ಏಕೆ ಕರೆಯುತ್ತಾರೆ?

.................................................................................................................................

.................................................................................................................................

## 4.6 ಅಭ್ಯಾಸ ಪ್ರಶ್ನೆಗಳು

1. ಕುಮಾರವ್ಯಾಸನ ಕಾಲನಿರ್ಣಯಕ್ಕೆ ಸಹಾಯಕವಾಗಿರುವ ಪ್ರಮಾಣಗಳಾವುವು?
2. ಕರ್ಣಾಟ ಭಾರತ ಕಥಾಮಂಜರಿಯ ಆಕರ, ವಸ್ತು, ಪಾತ್ರಗಳ ವಿಶೇಷತೆಗಳನ್ನು ಕುರಿತು ಬರೆಯಿರಿ.
3. ಕುಮಾರವ್ಯಾಸ ಭಾರತದ ಮುಖ್ಯ ಸನ್ನಿವೇಶಗಳಾವುವು? ಕುಮಾರವ್ಯಾಸನ ಭಾಷೆ ಶೈಲಿಯ ವಿಶೇಷಾಂಶಗಳನ್ನು ಗುರುತಿಸಿ.
4. ಕನ್ನಡ ಸಾಹಿತ್ಯದಲ್ಲಿ ಕುಮಾರವ್ಯಾಸನ ಮತ್ತು ಅವನ ಕಾವ್ಯದ ಸ್ಥಾನವೇನು?

## 4.7 ಸಾರಾಂಶ

ಭಕ್ತಯುಗದ ಹಿನ್ನೆಲೆಯಲ್ಲಿ ಬಂದ ಕುಮಾರವ್ಯಾಸ ಮಹಾಭಾರತದ ಕಥೆಯನ್ನು ಕೃಷ್ಣಪಾರಮ್ಯ ಹೇಳಲು ಬಳಸಿಕೊಂಡಿರುವುದು ಎದ್ದು ಕಾಣುವ ಅಂಶ. ವಚನ ಸಾಹಿತ್ಯದ ಹಿನ್ನೆಲೆಯಲ್ಲಿ ಬಂದ ಚಾಮರಸ ಶಿವಪಾರಮ್ಯವನ್ನು ಹೇಳಲು ಹೊರಟಿದ್ದು ಸಹಜವಾಗಿಯೇ ಇದೆ. ಈ ಭಾಗದಲ್ಲಿ ಹೊರನೋಟಕ್ಕೆ ತೀರ ವಿಭಿನ್ನವಾಗಿ ಕಾಣುವ ಈ ಕೃತಿಗಳು ಕಾವ್ಯಗರ್ಭದಲ್ಲಿ ಭಕ್ತಿ ಪಾರಮ್ಯವನ್ನೆ ಎತ್ತಿ ಹಿಡಿಯುವಂಥವು. ಯುಗಧರ್ಮವನ್ನು, ಅಧ್ಯಾತ್ಮಿಕ ಅನುಭೂತಿಯನ್ನು ತಂದುಕೊಡುವ ಕೆಲಸ ಮಾಡುತ್ತವೆ.

## ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯದ ಪ್ರಾದೇಶಿಕ ಹಾಗೂ ಅಧ್ಯಯನ ಕೇಂದ್ರಗಳು

## Regional and Study Centres of Karnataka State Open University




(ನಮೂದಿಸಿರುವ ಅಂಕಿ - ಜಿಲ್ಲೆಯಲ್ಲಿರುವ ಒಟ್ಟು ಅಧ್ಯಯನ ಕೇಂದ್ರಗಳ ಸಂಖ್ಯೆಯನ್ನು ಸೂಚಿಸುತ್ತದೆ.)
(The Number indicate the total number of study Centres existing in that districts.)

